# ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ

(೨೦೧೭-೧೮ ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಚಲುವಾದಿ ಚರಣ್‌ರಾಜ

ನೋಂದಣಿ ಸಂಖ್ಯೆ

೧೭೦೧೯೦೩೦೦೧೩

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ್

ಪ್ರಾಧ್ಯಾಪಕರು

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೭-೧೮

# ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ

(೨೦೧೭-೧೮ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕರು

**ಚಲುವಾದಿ ಚರಣ್‌ರಾಜ**

**ನೋಂದಣಿ ಸಂಖ್ಯೆ**
**೧೭೦೧೮೦೩೦೦೧೩**

ಮಾರ್ಗದರ್ಶಕರು

**ಡಾ. ಕಲವೀರ ಮನ್ವಾಚಾರ್**
ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಸಮಾಜ ವಿಜ್ಞಾನಗಳ ನಿಕಾಯ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

'ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಚಲುವಾದಿ ಚರಣ್‌ರಾಜ ಅವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೯/೦೮/೨೦೧೮

ಸ್ಥಳ : ವಿದ್ಯಾರಣ್ಯ

(ಮಾರ್ಗದರ್ಶಕರು)

ಡಾ. ಕಲವೀರ ಮನ್ವಾಚಾರ್

ಪ್ರಾಧ್ಯಾಪಕರು

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

'ಶ್ರೀ ಉಜ್ಜನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಕಲವೀರ ಮನ್ವಾಚಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೬/೦೮/೨೦೧೮

ಸ್ಥಳ : ವಿದ್ಯಾರಣ್ಯ

ಚಲುವಾದಿ ಚರಣ್‌ರಾಜ
ಸಂಶೋಧನ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ

## ಪರಿವಿಡಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಪದ ನಿಷ್ಪತ್ತಿ

### ೧.೧. ಪ್ರಸ್ತಾವನೆ :

ಅಲೆಮಾರಿ ಜೀವನದ ಹಂತದಿಂದ ಆರಂಭಿಸಿದ ಮಾನವನ ಜೀವನ ವಿಧಾನವು ಕ್ರಮೇಣ ಕಾಲಾಂತರದಲ್ಲಿ ಗುಂಪಾಗಿ ವಾಸಿಸುವ ನಾಗರೀಕ ಹಂತವನ್ನು ತಲುಪಿತು. ಈ ಹಂತದಲ್ಲಿ ಜಗತ್ತಿನ ಅನೇಕ ನಾಗರೀಕತೆಗಳು ಬೆಳೆದುಬಂದವು. ಇಲ್ಲಿಂದಲೇ ವ್ಯವಸ್ಥಿತವಾದಂತಹ ಜೀವನ ಆರಂಭವಾಯಿತು. ಮುಂದಿನ ಹಂತದಲ್ಲೂ ತಮ್ಮತಮ್ಮ ಗುಂಪನ್ನು ಒಂದೆಡೆ ಸೇರಿಸಿ ಅನೇಕ ಸಮುದಾಯಗಳು ನೆಲೆ ನಿಂತವು. ಆ ನೆಲೆಗೆ ಒಂದು ಗುರುತಿಸಬಹುದಾದಂತಹ ಹೆಸರನ್ನು ನೀಡಲಾಯಿತು.

ಅದೇ ಮುಂದೆ ಊರು, ಗ್ರಾಮ, ಹಳ್ಳಿ, ಹಟ್ಟಿ, ಕಟ್ಟೆ ಹೀಗೆ ವಾಸದ ನೆಲೆಗಳು ಆರಂಭವಾದವು. ತಮ್ಮದೇ ಆದಂತಹ ಮನೆ, ಗುಡಿಸಲುಗಳ ರಚನೆಯಾಗಿ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ 'ಗ್ರಾಮ ಸಮಾಜ' ಎಂಬ ಪರಿಕಲ್ಪನೆಯು ಮೂಡತೊಡಗಿತು. ಅಲೆಮಾರಿ ಜೀವನ ಸಂಸ್ಕೃತಿಯಿಂದ ಪಲ್ಲಟಗೊಂಡ ಮಾನವ ಸಮುದಾಯವು ಈ ಬಗೆಯ ಗ್ರಾಮ ಸಮಾಜದಲ್ಲೂ ಬದುಕಿದ್ದೇ ಜಗತ್ತಿನ ವಿಕಾಸಕ್ಕೆ ಮಹಾಮಾರ್ಗವಾಯಿತೆಂಬುದನ್ನು ಗಮನಿಸಬೇಕು. ಈ ಮೂಲಕ ಆಯಾ ಜನಾಂಗದ ಸಂಸ್ಕೃತಿಯು ಒಂದೊಂದು ನೆಲೆಯಲ್ಲಿ ಬೆಳೆಯುತ್ತಾ ಬಂದಿತು. ಇದೇ ಇಂದಿಗೂ ನಾಗರಿಕವೆಂದು ಕರೆಯಲ್ಪಡುವ ಆಧುನಿಕ ಹಾಗೂ ಆಧುನಿಕೋತ್ತರ ಜೀವನಕ್ಕೆ ಭದ್ರ ತಳಹದಿಯೆಂದು ಹೇಳಬಹುದು.

ಸಂಸ್ಕೃತಿಗಳ ಬೆಳವಣಿಗೆಯು ಬಹುಮುಖ್ಯವಾಗಿ ಬೆಳೆದುಬಂದಿದ್ದು, ಮೌಖಿಕ ಪರಂಪರೆಯಡಿಯಲ್ಲಿ ಅಕ್ಷರಸ್ಥವಲ್ಲದ ಸಮುದಾಯದ ಬದುಕಿಗೆ ಮೌಖಿಕ ಸಂಪತ್ತು ತನ್ನ ಒಡಲಲ್ಲಿ ಅಪಾರವಾದ

ಸಂಸ್ಕೃತಿಯ ಏಳಿಗೆಯನ್ನು, ಸಮಾಜದ ಉನ್ನತಿಕೆಯನ್ನು ಅಡಗಿಸಿಟ್ಟಕೊಂಡಿದೆ. ಪರಂಪರೆಯ ಗರ್ಭದಿಂದಲೇ ಒಟ್ಟು ಜಗತ್ತಿನ ಪ್ರಾದೇಶಿಕವಾಗಿ ಎಲ್ಲೆಯನ್ನೂ ಗುರುತಿಸಿಕೊಂಡು ಅಧ್ಯಯನ ಮಾಡುವಾಗ ಕನ್ನಡ ಸಂಸ್ಕೃತಿಯ ಬೇರುಗಳು ಅನಾವರಣಗೊಳ್ಳುತ್ತವೆನ್ನುವುದು ಸಾರ್ವಕಾಲಿಕ ಸತ್ಯವಾಗಿದೆ. ನಗರ ಸಂಸ್ಕೃತಿಯೆಂದು ಕರೆಯಿಸಿಕೊಳ್ಳುವಲ್ಲಿಯೂ ಕೂಡ ಇದರ ಹಿಂದೆ 'ಗ್ರಾಮ ಸಮಾಜ' ಎಂಬ ಪರಿಕಲ್ಪನೆಯ ಅಗಾಧವಾದ ನೆಲೆಗಳಿವೆ. ಗ್ರಾಮ ಸಮುದಾಯ ಸಮಾಜದ ಮುಂದುವರೆದ ಜೀವನ ಸಂಸ್ಕೃತಿ ಕಾಲಾಂತರದಲ್ಲಿ ಅನೇಕ ಘಟ್ಟಗಳಲ್ಲಿ ಉಂಟಾದ ಮಾನವನ ಬದುಕಿನ ಸ್ಥಿತ್ಯಂತರಗಳು ತಿಳಿಯುತ್ತವೆ. ಈ ಬಗೆಯ ಸ್ಥಿತ್ಯಂತರಗಳು ಇಂದಿನ ಆಧುನಿಕ ಗ್ರಾಮ ಸಮಾಜದ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ಕುತೂಹಲದಿಂದ ಅಧ್ಯಯನ ಮಾಡುವಂತೆ ಪ್ರೇರಪಿಸುತ್ತವೆ.

**೧.೨. ಅಧ್ಯಯನದ ಉದ್ದೇಶ :**

ಆಧುನಿಕವಾಗಿ ಒಂದು ನಾಡಿನ ಭೌಗೋಳಿಕ ಎಲ್ಲೆಯನ್ನು ಗ್ರಹಿಕೆಯಲ್ಲಿರಿಸಿಕೊಂಡು ಸಂಸ್ಕೃತಿಯ ಅಧ್ಯಯನದಲ್ಲಿ ತೊಡಗುವಾಗ ಇನ್ನಿತರ ಮೂಲಾಧಾರಗಳನ್ನು ಗಮನಿಸಿದಂತೆ ಗ್ರಾಮೀಣ ಪರಿಸರ ಮತ್ತು ಶಾಸನಗಳನ್ನು ಪ್ರತ್ಯಕವಾಗಿ ಒಂದೊಂದು ಹಳ್ಳಿಯನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಆಧುನಿಕತೆಯೊಳಗೆ ಸಿಲುಕಿ ಅನೇಕ ಗ್ರಾಮಗಳ ಮೌಲ್ಯಗಳು ಕ್ಷೀಣಿಸುತ್ತಿವೆ. ಆದುದರಿಂದ ಒಂದು ಹಳ್ಳಿಯಲ್ಲಿ ದೊರೆಯುವ ಶಾಸನ, ಜನಪದ ಪರಂಪರೆಯ ಹಾಡು, ಕಥೆ, ಒಗಟು, ಗಾದೆ ಮುಂತಾದ ಸಾಹಿತ್ಯದ ಜೊತೆಜೊತೆಗೆ ಅಲ್ಲಿನ ಗ್ರಾಮ್ಯ ಪರಿಸರದ ಸಾಮಾಜಿಕ ಜೀವನ ವಿಧಾನ ವಿಶೇಷವಾಗಿ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಈ ಕಾರಣದಿಂದ ಗ್ರಾಮಗಳನ್ನು ಶಾಸನ ದೇವಾಲಯದ ಅಧ್ಯಯನ ತುಂಬಾ ಅಗತ್ಯವಿದೆ.

ಒಂದು ಗ್ರಾಮವನ್ನು ಒಂದು ಸಂಸ್ಕೃತಿಯೆಂದು ಭಾವಿಸಬೇಕು. ಅದೊಂದು ಪುಟ್ಟ ಜಗತ್ತೇ ಆಗಿರುತ್ತದೆ. ಆ ಜಗತ್ತಿನಲ್ಲಿ ತನ್ನದೇ ಮಿತಿಯಲ್ಲಿ ಸಾಂಸ್ಕೃತಿಕ ಚೌಕಟ್ಟನ್ನು ಒದಗಿಸಿಕೊಡುತ್ತದೆ. ಬಹುಮುಖ್ಯವಾಗಿ ಕನ್ನಡ ಸಂಸ್ಕೃತಿಯ ಅಧ್ಯಯನದಲ್ಲಿ ಒಂದು ಗ್ರಾಮದ ದೇವಾಲಯ ಮತ್ತು ಶಾಸನದ ಅಧ್ಯಯನ ಮಾಡುವ ಮೂಲಕ ಇಡಿಯಾದ ಸಂಸ್ಕೃತಿಯ ಪ್ರಾತಿನಿಧಿಕ ಅಂಶಗಳನ್ನು ಒಂದು ಭೌಗೋಳಿಕ ಮಿತಿಯ ಪುಟ್ಟ ಜಗತ್ತನ್ನೆಬಹುದಾದ ಎಲ್ಲಾ ಅಂಶಗಳನ್ನು 'ಹಳ್ಳಿ'ಯು ಒದಗಿಸುತ್ತದೆ.

ಈ ದೃಷ್ಟಿಯಿಂದ "ದೇವಾಲಯ ಮತ್ತು ಶಾಸನಗಳ ಅಧ್ಯಯನ" ಮಹತ್ವದ್ದೆಂದು ಹೇಳಬಹುದು. ಕನ್ನಡ ನಾಡಿನ ಗ್ರಾಮ ಮಟ್ಟದಲ್ಲಿ ಈ ದೇವಾಲಯ ಶಾಸನಗಳ ಬಗ್ಗೆ ಅಧ್ಯಯನಗಳು ನಡೆದಿಲ್ಲ

ಎಂದು ಹೇಳಬಹುದು. ಆದಕಾರಣ ಇಲ್ಲಿ ಒಂದು ಗ್ರಾಮದ ಪರಿಸರದ ದೇವಾಲಯದ ಶಾಸನಗಳ ಬಗ್ಗೆ ಅಧ್ಯಯನದ ಮೂಲಕ ದೇವಾಲಯದ ಮೂಲವನ್ನು ನೋಡಿ ಶಾಸನದ ಶ್ರೇಷ್ಠತೆಯ, ಪರಂಪರೆಯ ಶ್ರೇಷ್ಠತೆಯನ್ನು ಸಂಸ್ಕೃತಿಗೆ ಹೇಗೆ ಆಕರವಾಗಿ ಬಳಸಬಹುದೆಂಬ ಒಳನೋಟನಗಳ ಕಡೆಗೆ ಇಲ್ಲಿನ ಅಧ್ಯಯನವು ಕೇಂದ್ರಿಕೃತವಾಗಿರುತ್ತದೆ.

ಶಾಸನಗಳ ಮೂಲಕ ಒಂದು ದೇವಾಲಯದ ಸಮಗ್ರ ಇತಿಹಾಸ, ಸಂಸ್ಕೃತಿ ಮತ್ತು ಆಚರಣೆಗಳನ್ನು ಆ ಗ್ರಾಮದ ಪ್ರಾದೇಶಿಕ ಸಂಸ್ಕೃತಿಯ ಚರಿತ್ರೆಯನ್ನು, ಅಲ್ಲಿನ ವೈಶಿಷ್ಟ್ಯತೆಯನ್ನು ಹೇಳುವ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಆಯ್ಕೆಮಾಡಿಕೊಳ್ಳಲಾಗಿದೆ.

**೧.೩. ಅಧ್ಯಯನದ ಸ್ವರೂಪ :**

"ಉಜ್ಜಿನಿ ಶ್ರೀ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಆಚರಣೆಗಳು" ಎಂಬುವುದು ಒಂದು ಗ್ರಾಮದ ಶಾಸನಶಾಸ್ತ್ರದ ಹಿನ್ನೆಲೆಯಲ್ಲಿ ಆ ದೇವಾಲಯದ ಪ್ರಾಚೀನ ಇತಿಹಾಸದ ಇಲ್ಲಿನ ಸಂಸ್ಕೃತಿಯನ್ನು ತಿಳಿಯುವ ಮೂಲಕ ಸಾಂಸ್ಕೃತಿಕ ಗ್ರಾಮೀಣ ಸಮುದಾಯದ ಉದ್ಯೋಗ, ವ್ಯವಹಾರ, ಊಟ, ಉಡುಗೆ ಒಟ್ಟಾರೆ ಸಂಸ್ಕೃತಿ ಇದರ ತೆಕ್ಕೆಗೆ ಒಳಪಡುತ್ತದೆ. ಒಂದು ನಿರ್ದಿಷ್ಟ ಗ್ರಾಮದ ದೇವಾಲಯದ ಶಾಸನಗಳು ಮತ್ತು ಆಚರಣೆಗಳು ಅಧ್ಯಯನಕ್ಕೆ ತೊಡಗುವ ಮೊದಲು ಸ್ಥೂಲವಾಗಿಯಾದರೂ ಈ ಅಧ್ಯಯನದ ರೂಪುರೇಷೆಗಳನ್ನು ಕಲ್ಪಿಸುವುದು ಒಳ್ಳೆಯದೆಂದು ತೋರುತ್ತದೆ.

"ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ" ಎಂಬ ಅಧ್ಯಯನದ ವಸ್ತು ವಿಷಯವನ್ನು ಏಳು ಅಧ್ಯಾಯಗಳಲ್ಲಿ ರೂಪಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು 'ಉಜ್ಜಿನಿ' ಪದ ನಿಷ್ಪತ್ತಿಯ ಕುರಿತು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ಉಜ್ಜಿನಿ ಗ್ರಾಮದ ಇತಿಹಾಸ ಮತ್ತು ಶಾಸನಗಳು' ಎಂಬ ಅಧ್ಯಯನದಲ್ಲಿ ಉಜ್ಜಿನಿಯ ಚರಿತ್ರೆ, ಉಜ್ಜಿನಿಯ ಬಗೆಗೆ ವಿಷಯವನ್ನು ಹೊಂದಿರುವ ಶಾಸನಗಳು, ಉಜ್ಜಿನಿಯ ಬಗ್ಗೆ ತಿಳಿಯಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಗ್ರಾಮದ ಐತಿಹ್ಯಗಳು ಎಂಬ ಶೀರ್ಷಿಕೆಯಲ್ಲಿ ಉಜ್ಜಿನಿಯ ಪುರಾಣ, ಐತಿಹ್ಯ, ಕಥೆ, ಲಾವಣಿ, ಗಾದೆ, ಒಗಟುಗಳು, ನಂಬಿಕೆಗಳು ಮತ್ತು ಮರುಳಸಿದ್ಧೇಶ್ವರ ದೇವಾಲಯದ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಉಜ್ಜಿನಿ ಗ್ರಾಮೀಣ ಬದುಕು' ಎಂಬ ಅಧ್ಯಾಯದಲ್ಲಿ ಉಜ್ಜಿನಿ ಜನರ ಸಾಮಾಜಿಕ ವ್ಯವಸ್ಥೆ, ಧಾರ್ಮಿಕತೆ, ಆರ್ಥಿಕ ಬದುಕು ಮತ್ತು ಶೈಕ್ಷಣಿಕ ಸ್ಥಿತಿ–ಗತಿಗಳ ಬಗ್ಗೆ ವಿವಿಧ ಹಂತಗಳಲ್ಲಿ ಹೇಳಲಾಗಿದೆ.

ಐದನೆಯ ಅಧ್ಯಾಯದಲ್ಲಿ 'ಉಜ್ಜಿನಿ ಗ್ರಾಮದ ಸಂಸ್ಕೃತಿ' ಎಂಬ ಅಧ್ಯಾಯದಲ್ಲಿ ಉಜ್ಜಿನಿ ಗ್ರಾಮದ ರೂಢಿ–ಪದ್ಧತಿಗಳು, ಹಬ್ಬ–ಹರಿದಿನಗಳು, ಜಾತ್ರೆ ಮತ್ತು ರಥೋತ್ಸದ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ 'ಉಜ್ಜಿನಿ ಗ್ರಾಮದ ಮೇಲೆ ಆಧುನಿಕತೆಯ ಪ್ರಭಾವಗಳು" ಎಂಬ ಅಧ್ಯಾಯದಲ್ಲಿ ಗ್ರಾಮದ ಸಾಮಾಜಿಕ ಬದಲಾವಣೆ, ಶೈಕ್ಷಣಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಭೌತಿಕ ಮತ್ತು ಭಾಷಿಕ ಬದಲಾವಣೆಯ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವನ್ನು ಹೊಂದಿದೆ. ಇದರಲ್ಲಿ ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಚರಿತ್ರೆ ಮತ್ತು ಅದಕ್ಕೆ ಸಂಬಂಧಿಸಿದ ಸಂಸ್ಕೃತಿ, ಆಚರಣೆಗಳು, ಗ್ರಾಮೀಣ ಬದುಕಿನ ಬಗ್ಗೆ ದೊರೆತಿರುವ ಶಾಸನಗಳಿಂದ ತಿಳಿದಿರುವ ವಿಷಯ ವಸ್ತುವಿನ ಅಧ್ಯಾಯನದಿಂದ ಆ ದೇವಾಲಯದ ಬಗ್ಗೆ ತಿಳಿಸಲಾಗಿದೆ. ಜೊತೆಗೆ ಅನುಬಂಧಗಳು, ಶಾಸನದ ಪಠ್ಯಗಳು, ನಕ್ಷೆಗಳು ಛಾಯಾಚಿತ್ರಗಳು ಒಳಗೊಂಡಿದೆ.

ಅಧ್ಯಯನಕ್ಕೆ ಒಳಪಡಿಸುವ ಶಾಸನಗಳ ಮತ್ತು ದೇವಾಲಯ ಗ್ರಾಮದ ಭೌಗೋಳಿಕ ಪರಿಸರದ ವಿವರಣೆ ಬಹುಮುಖ್ಯವಾದದ್ದು. ಒಂದು ಹಳ್ಳಿಯ ಪ್ರಮುಖ ಘಟನೆ, ದೇವಾಲಯದ ಸ್ಥಾಪನೆ ದೇವಾಲಯದ ಶ್ರೇಷ್ಠತೆ, ಆ ಹಳ್ಳಿಯ ಪ್ರಾಚೀನತೆಯನ್ನು ಮತ್ತು ಆ ಹಳ್ಳಿಯ ಸಂಸ್ಕೃತಿ, ಆಚರಣೆಗಳ ಬಗ್ಗೆ ಊರಿನ ಮೇರೆಗಳು, ಉದ್ಯೋಗ, ವ್ಯವಸಾಯ, ಕಲೆ, ವಾಸ್ತುಶಿಲ್ಪ ಮತ್ತು ಸಾಹಿತ್ಯದ ಬಗ್ಗೆ ತಿಳಿಯುವಲ್ಲಿ ಈ ಅಧ್ಯಯನವು ಬಹುಮುಖ್ಯವಾಗಿದೆ.

೧.೪. ವ್ಯಾಪ್ತಿ :

ಯಾವುದೇ ವಿಷಯವನ್ನು ಅಧ್ಯಯನಕ್ಕೆ ಮಾಡಿಕೊಳ್ಳುವಾಗ ಅದಕ್ಕೊಂದು ಸೀಮಿತ ಚೌಕಟ್ಟಿನ ಅಗತ್ಯವಿರುತ್ತದೆ. ವ್ಯಾಪ್ತಿಗೆ ಒಳಪಡದ ಅಧ್ಯಯನವು ಎಲ್ಲೆಯನ್ನು ಮೀರಿ ಬೆಳೆಯುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಕೈಗೊಂಡ 'ಶ್ರೀ ಉಜ್ಜಿನಿ ಮರುಳಸಿದ್ಧೇಶ್ವರ ದೇವಾಲಯದ ಶಾಸನಗಳು ಮತ್ತು ಸಂಸ್ಕೃತಿ' ಎಂಬ ವಸ್ತು ವಿಷಯವನ್ನು ಶಾಸನಗಳನ್ನು ಮೂಲ ಆಕರಗಳನ್ನಾಗಿಸಿಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ. ಮತ್ತು ದೇವಾಲಯದ ನಿರ್ಮಾಣದ ಕಾಲದಿಂದ ಇಂದಿನವರೆಗೂ ಪರಿವರ್ತನೆಯಾದತಹ ಘಟನೆಗಳನ್ನು ಶಾಸನದ ಮೂಲಕ ತಿಳಿಯುವುದರ ಮೂಲಕ ಪ್ರಸ್ತುತ

ಸಂಸ್ಕೃತಿ ಮತ್ತು ಆಚರಣೆಗಳ ಬಗ್ಗೆ ತಿಳಿಸುವ ಉದ್ದೇಶದಿಂದ ಶಾಸನಗಳ ಮೂಲಕ ಈ ವ್ಯಾಪ್ತಿಯ ಪರದಿಯೊಳಗೆ ಅಧ್ಯಯನ ಮಾಡಲಾಗಿದೆ.

**೧.೫. ಉಜ್ಜನಿ ಗ್ರಾಮದ ಪದನಿಷ್ಪತ್ತಿ :**

ಪ್ರತಿಯೊಂದು ಗ್ರಾಮದ ಹೆಸರು ನಿಷ್ಪತ್ತಿಗೆ ಐತಿಹಾಸಿಕ ಪರಂಪರೆ ಇರುತ್ತದೆ. ಅದಕ್ಕೆ ಪೂರಕ ಸಾಮಾಗ್ರಿಯಾಗಿ ಶಾಸನಗಳು ಸಾಕ್ಷಿಯಾಗಿರುತ್ತವೆ. ಅಂತಹ ಪ್ರಮಾಣ ಪೂರ್ವ ದಾಖಲೆಗಳು ಉಜ್ಜನಿ ಮಠ ವಿಚಾರಗಳ ಬಗ್ಗೆ ಹೇಳುತ್ತವೆ. ಆದರೆ 'ಉಜ್ಜನಿ' ಗ್ರಾಮನಾಮದ ಬಗ್ಗೆ ವಿಶೇಷ ಆಧಾರಗಳು ಇಲ್ಲವಾದ್ದರಿಂದ ಗ್ರಾಮನಾಮ ಇತಿಹಾಸಕ್ಕೆ ಶಾಸನ ಮತ್ತು ಭಾಷಿಕ ಅಥವಾ ಮೌಖಿಕ ಅಂಶಗಳೇ ಪ್ರಮುಖ ಆಧಾರಗಳಾಗಿವೆ. ಉಜ್ಜನಿ ಗ್ರಾಮ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿದೆ. ಕೂಡ್ಲಿಗಿ ಪಟ್ಟಣದಿಂದ ನೈರುತ್ಯ ದಿಕ್ಕಿಗೆ ೩೦ ಕಿ.ಮೀ. ದೂರದಲ್ಲಿದೆ. ಈ ಸ್ಥಳ ದಾವಣಗೇರೆ ಜಿಲ್ಲೆಯ ಜಗಳೂರು ತಾಲೂಕಿನ ಗಡಿ ಪ್ರದೇಶವಾಗಿದೆ.

ಕರ್ನಾಟಕ ಗೆಜೆಟೀಯರ್‌ನ ಉಲ್ಲೇಖದಂತೆ ಪುರಾಣದಲ್ಲಿ ಉಜ್ಜನಿಗೆ 'ರತ್ನಾಪುರ' ಎಂಬ ಹೆಸರು ಇದ್ದು, ಊರ್ಜು=ವನ ತೋಟ, ವುಜನಿ, ಉಜ್ಜೈಯಿನಿ, ಉಜ್ಜನಿ=ಉದ್ಯಾನವನ ಎಂದು ತಿಳಿಯುತ್ತದೆ. ಆದರೆ 'ಉಜ್ಜನಿ' ಎಂಬ ಪದದ ಅರ್ಥ ಬಿಡಿಸಿ ಬರೆದಾಗ ಉಜ್ಜ+ನಿ ಎಂದಾಗುತ್ತದೆ. ಉಜ್ಜು ಎಂದರೆ ವನ ಎಂದು ಅರ್ಥವಾಗುತ್ತದೆ. ಆದರೆ 'ನಿ' ಎಂಬುವುದಕ್ಕೆ ಅರ್ಥ ಇಲ್ಲ. ಇದು ಉಜ್ಜಾಣ ಎಂಬ ಪದದಿಂದ ಬಂದಿರಬಹುದು. ಉಜ್ಜಾಣ ಎಂಬುವುದು ಪ್ರಾಕೃತದಲ್ಲಿ ಆದರೆ ಇದು ಸಂಸ್ಕೃತದಲ್ಲಿ 'ಉದ್ಯಾನ' ಎಂದು ಅರ್ಥಕೊಡುತ್ತದೆ. ಉದ್ಯಾನ ಎಂದರೆ ವನ, ಉದ್ಯಾನವನ ಎಂದು ಅರ್ಥವಾಗುತ್ತದೆ. ಆದ್ದರಿಂದ 'ಉಜ್ಜನಿ' ಎಂಬ ಊರಿನ ಹೆಸರು 'ಉದ್ಯಾನವನ' ಎಂಬ ಅರ್ಥವನ್ನು ಕೊಟ್ಟು, ಈ ವನಗಳಲ್ಲಿ, ಬೆಟ್ಟಗಳಲ್ಲಿ, ಊರುಗಳಲ್ಲಿ ವಾಸವಾಗಿರುವವರು ಶೈವಧರ್ಮದ ಒಂದು ಭಾಗವಾದ ಕಾಳಮುಖ ಆಗಿರಬೇಕು ಎಂದು ಹೇಳಬಹುದು.

# ಅಧ್ಯಾಯ – ಎರಡು

# ಉಜ್ಜನಿ ಗ್ರಾಮದ ಇತಿಹಾಸ ಮತ್ತು ಶಾಸನಗಳು

**೨.೧. ಶಾಸನಗಳ ಹಿನ್ನೆಲೆಯಲ್ಲಿ ಉಜ್ಜನಿ ಪರಿಸರದ ಇತಿಹಾಸ :**

ಕರ್ನಾಟಕವನ್ನು ಪ್ರಾಚೀನ ಕಾಲದಿಂದ ಅನೇಕ ರಾಜಮನೆತನಗಳು ಆಡಳಿತವನ್ನು ನಡೆಸಿಕೊಂಡು ಬಂದಿವೆ. ಅದರಲ್ಲಿ ಪ್ರಮುಖವಾಗಿ ಕೂಡ್ಲಿಗಿ ತಾಲೂಕಿನ ಸುತ್ತಮುತ್ತಲಿನ ಪ್ರದೇಶವನ್ನು ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ದೇವಗಿರಿಯ ಯಾದವರು, ಹೊಯ್ಸಳರು, ವಿಜಯನಗರ ಅರಸರು, ಪಾಳೆಗಾರರು ಮುಂತಾದ ರಾಜಮನೆತನಗಳು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಆಡಳಿತ ನಡೆಸಿದ್ದಾರೆ ಎಂದು ತಿಳಿದುಬರುತ್ತದೆ. ಇದಕ್ಕೆ ಸಾಕ್ಷಿ ಎಂಬಂತೆ ನಮಗೆ ಅನೇಕ ಶಾಸನಗಳು ದೊರೆಯುತ್ತವೆ.

**ಮೌರ್ಯರು :**

ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಮಗಧ ರಾಜ್ಯದ ನಂದ ಸಾರ್ವಭೌಮರ ಕಾಲದಲ್ಲಿ ಅವರ ಪ್ರಭಾವ ಕರ್ನಾಟಕದವರೆಗೂ ಹಬ್ಬಿತ್ತೆಂದು ತಿಳಿಸುವ ಐತಿಹಾಸಿಕ ಮಾಹಿತಿಗಳು ದೊರಕುತ್ತವೆ. ಮೌರ್ಯ ವಂಶದ ಸ್ಥಾಪಕನಾದ ಚಂದ್ರಗುಪ್ತ (ಕ್ರಿ.ಪೂ. ೩೨೪–೩೦೦೦) ಕರ್ನಾಟಕದ ಶ್ರವಣಬೆಳಗೋಳದಲ್ಲಿ ತನ್ನ ಗುರುವಿನೊಡನೆ ಬಂದು ನೆಲೆಸಿದ್ದು ಐತಿಹ್ಯಗಳೂ, ಶಾಸನಗಳೂ ತಿಳಿಸುತ್ತವೆ. ಆತನ ಮೊಮ್ಮಗನಾದ ಅಶೋಕನ ಶಿಲಾಶಾಸನಗಳು ಈ ರಾಜ್ಯದ ಮಸ್ಕಿ, ಕೊಪ್ಪಳ, ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟಿಂಗ ರಾಮೇಶ್ವರಗಳಲ್ಲ ದೊರಕುವುದಲ್ಲದೆ ಮಸ್ಕಿ ಬಳಿಯ ಸುವರ್ಣಗಿರಿ ಮತ್ತು ಬ್ರಹ್ಮಗಿರಿ ಬಳಿಯ ಇಸಿಲ ನಗರಗಳು ಆತನ ಪ್ರಾದೇಶಿಕ ಮುಖ್ಯ ನಗರಗಳಾಗಿದ್ದವೆಂಬ ಅಂಶವನ್ನು ತಿಳಿಸುತ್ತವೆ. ಇದರಿಂದ ಕರ್ನಾಟಕದ ಬಹುಭಾಗ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದಿತೆಂದು ತಿಳಿದುಬರುತ್ತದೆ. ಅಶೋಕನ ರಾಜ್ಯ ಕಂಚಿಯವರೆಗೂ ಹಬ್ಬಿದ್ದು, ಇಡೀ ಕರ್ನಾಟಕ ಅದರಲ್ಲಿ ಸೇರಿತ್ತೆಂಬುದು ತಿಳಿದುಬರುತ್ತದೆ. ಇದರಿಂದ ಬಳ್ಳಾರಿ

ಜಿಲ್ಲೆಯ ಬಹುಭಾಗವನ್ನು ಮೌರ್ಯರ ಅಶೋಕ ಚಕ್ರವರ್ತಿಯ ಆಡಳಿತಕ್ಕೆ ಒಳಪಟ್ಟಿರುವುದರಿಂದ ಉಜ್ಜಿನಿ ಕೂಡ ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದಾಗಿದೆ.

**ಶಾತವಾಹನರು :**

ಅನಂತರ ದಕ್ಷಿಣಾಪಥ ಸಾರ್ವಭೌಮರಾಗಿದ್ದ ಶಾತವಾಹನರ ಆಡಳಿತಕ್ಕೆ ಕರ್ನಾಟಕದ ಬಹುಭಾಗ ಸೇರಿದ್ದಂತೆ ಕಾಣುತ್ತದೆ. ಶಾತವಾಹನರ ಮೂಲಪುರುಷನಾದ ಸೀಮುಕ ಕರ್ನಾಟಕದವನೆಂದೂ, ಈತ ಬಳ್ಳಾರಿ ಜಿಲ್ಲೆಗೆ ಸೇರಿದವನೆಂದೂ ಹಲವು ವಿದ್ವಾಂಸರು ಪ್ರತಿಪಾದಿಸಿದ್ದಾರೆ. ಈ ಪ್ರದೇಶದ ಮೇಲೆ ಅವರ ಆಳ್ವಿಕೆಯಿತ್ತೆಂಬುದಾಗಿ ಅನಂತರದ ಅನೇಕ ಶಾಸನಗಳು ಸೂಚಿಸುತ್ತವೆ. ಕರ್ನಾಟಕದ ಉತ್ತರಭಾಗ ಅವರ ಆಳ್ವಿಕೆಯಲ್ಲಿದ್ದರೆ, ದಕ್ಷಿಣದಲ್ಲಿ ಪುನ್ನಾಟ ಮೊದಲಾದ ಹಲವು ಸಣ್ಣ ರಾಜ್ಯಗಳಿದ್ದವು. ಲೇಖಕರು ಕರ್ನಾಟಕದ ಕೆಲವು ಪ್ರದೇಶಗಳ ಪ್ರಸ್ತಾಪ ಮಾಡಿದ್ದಾರೆ. ಪರಿಪ್ಲಸ್ ಆಫ್ ದಿ ಎರಿತ್ರಿಯನ್ ಸೀ ಎಂಬ ಗ್ರಂಥದಲ್ಲಿ (೧ನೆಯ ಶತಮಾನ) ಮತ್ತು ಪ್ಲಿನಿಯ (೭೭-೭೮) ಬರೆಹಗಳಲ್ಲಿ ಈ ಪ್ರಸ್ತಾಪಗಳಿವೆ. ಬಾದಾಮಿ (ಬಡಿಯಮಿಯೊಇ), ಮುದ್ಗಲ್ (ಮದೌಗೌಲ್ಯ), ಬನವಾಸಿ (ಬನೌಅಸೆಇ), ಹೂವಿನ ಹಿಪ್ಪರಗಿ (ಹಿಪ್ಪೊಕೌರ)ಗಳನ್ನೂ ಪುನ್ನಾಟದ (ಪೌನ್ನಾಟ) ವೈಡೂರ್ಯಗಳನ್ನೂ ದಕ್ಷಿಣ ಕನ್ನಡ ಜಿಲ್ಲೆಯ ಮಲ್ಪೆಯನ್ನೂ (ಮಲಿಪ್ಪಲ), ಟಾಲೆಮಿ (ಸು. ೧೫೦) ಹೆಸರಿಸುತ್ತಾನೆ. ಕರ್ನಾಟಕ ಅಸ್ತಿತ್ವಕ್ಕೆ ಬಂದಿದ್ದುದಲ್ಲದೆ ತನ್ನದೇ ಆದ ಸಂಸ್ಕೃತಿಯನ್ನು ನಿರ್ಮಿಸಿಕೊಂಡಿದ್ದು ಪರಕೀಯರೊಂದಿಗೂ ಸಂಪರ್ಕ ಬೆಳೆಸಿಕೊಂಡಿತ್ತೆಂದು ಹೇಳಬಹುದು.

ಶಾತವಾಹನರ ಅನಂತರ ಚುಟುವಂಶದ ರಾಜರು ಬನವಾಸಿ ಪ್ರಾಂತ್ಯದಲ್ಲಿ ಪ್ರಬಲರಾದರು. ಸ್ವಲ್ಪ ಕಾಲಾಂನತರ ಈ ಪ್ರದೇಶದಲ್ಲಿ ಕದಂಬರು, ದಕ್ಷಿಣ ಕರ್ನಾಟಕದ ಗಂಗರು, ಇತರ ಭಾಗಗಳಲ್ಲಿ ಬಾಣರು, ಆಲುಪರು, ಸೇಂದ್ರಕರು, ನಳರು ಸಣ್ಣ ಸಣ್ಣ ರಾಜ್ಯಗಳನ್ನು ಸ್ಥಾಪಿಸಿಕೊಂಡಿದ್ದರೆಂದು ತಿಳಿದುಬರುತ್ತದೆ. ಚುಟುವಂಶದ ರಾಜರ ವಿಷಯ ಹೆಚ್ಚು ತಿಳಿಯದಿದ್ದರೂ ಬನವಾಸಿಯು ನಾಗಶಾಸನದಲ್ಲಿ ಉಕ್ತನಾಗಿರುವ ಹಾರೀತಿಪುತ್ರ, ವಿಣ್ಹುಕಡ, ಚುಟುಕುಲಾನಂದ, ಶಾತಕರ್ಣಿ ಇವರಲ್ಲೊಬ್ಬ ಈಗಿನ ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿರುವ ನಾಗಶಿಲೆಯ ಶಾಸನದಲ್ಲಿ ವಿಣ್ಹುಕಡ, ಚುಟುಕುಲಾನಂದ, ಸಾತಕರ್ಣಿ ಆತನ ಪುತ್ರಿ ಶಿವಸ್ಕಂಧನಾಗಶ್ರೀ ಇವರ ಹೆಸರುಗಳು ಉಕ್ತವಾಗಿವೆ. ವಿಣ್ಹುಕಡ, ಶಾತಕರ್ಣಿ ಬನವಾಸಿಯ ದೊರೆಯೆಂದು ಮಳವಳ್ಳಿ ಶಾಸನ ತಿಳಿಸುತ್ತದೆ. ಬಹುಶಃ ಮಳವಳ್ಳಿ ಶಾಸನದ ವಿಣ್ಹುಕಡ, ಶಾತಕರ್ಣಿ ಅದೇ ಹೆಸರಿನ ೯ನೆಯ ವ್ಯಕ್ತಿಯಾಗಿದ್ದು, ೧ನೆಯ ಶಾತಕರ್ಣಿಯ ಮೊಮ್ಮಗನೂ ಶಿವಸ್ಕಂದ, ನಾಗಶ್ರೀಯ

ಮಗನೂ ಆಗಿದ್ದಿರಬಹುದು. ಶಿವಸ್ಕಂದ, ನಾಗಶ್ರೀ ಮತ್ತು ಸಮಕಾಲೀನ ಪಲ್ಲವ ದೊರೆ ಶಿವಸ್ಕಂಧವರ್ಮ ಈ ಹೆಸರುಗಳಲ್ಲಿ ಹೋಲಿಕೆಯಿರುವುದರಿಂದಲೂ ಆ ಕಾಲದಲ್ಲಿ ಪಲ್ಲವರು ಬಳ್ಳಾರಿ ಪ್ರದೇಶದ ಮೇಲೆ ಅಧಿಕಾರ ಪಡೆದಿದ್ದುದರಿಂದಲೂ ಇವರುಗಳಲ್ಲಿ ಸಂಬಂಧವಿದ್ದಿರಬಹುದೆಂದು ಭಾವಿಸಲಾಗಿದೆ. ಕದಂಬ ಸಂತತಿಯ ಸ್ಥಾಪಕ ಮಯೂರವರ್ಮ ಪಲ್ಲವರಿಂದ ತನ್ನ ರಾಜ್ಯ ಪ್ರದೇಶವನ್ನು ಗೆದ್ದನೆಂಬ ಅಂಶ ಈ ವಾದಕ್ಕೆ ಸಹಾಯಕವಾಗಿದೆ.

**ಕದಂಬರು :**

ವರ್ತುಲವಾಗಿ ಕ್ರಿ.ಪೂ. ೨೩೦ರಲ್ಲಿ ಶಾತವಾಹನ ರಾಜಮನೆತನದವರು ಅಧಿಕಾರಕ್ಕೆ ಬಂದರು. ಅವರ ಆಳ್ವಿಕೆ ಸರಿ ಸುಮಾರು ನಾಲ್ಕು ಶತಮಾನಗಳವರೆಗೆ ನಡೆಯಿತು. ೩ನೆಯ ಶತಮಾದವರೆಗೆ ಶಾತವಾಹನ ರಾಜಮನೆತನದ ವಿಯೋಜನೆಯಿಂದಾಗಿ ಮೊಟ್ಟ ಮೊದಲ ಸ್ಥಳೀಯ ಸಾಮ್ರಾಜ್ಯ ಬನವಾಸಿಯ ಕದಂಬರ ರಾಜಮನೆತನವು ಆಧುನಿಕ ಉತ್ತರ ಕನ್ನಡ (ಕಾರವಾರ) ಜಿಲ್ಲೆಯಲ್ಲಿ ತಲೆದೋರಿತು. ಇದರ ಸ್ಥಾಪಕ ಇಂದಿನ ಶಿವಮೊಗ್ಗ ಜಿಲ್ಲೆಯ ತಾಳಗುಂದದ ಸ್ಥಳೀಯ ಬ್ರಾಹ್ಮಣ ಮಯೂರವರ್ಮ ಹಾಗೂ ಪಶ್ಚಿಮ ಗಂಗಾ ರಾಜಮನೆತನದ ರಾಜ್ಯವು ದಕ್ಷಿಣ ಕರ್ನಾಟಕದಲ್ಲಿ ಆರಂಭವಾಯಿತು. ಈ ಘಟನೆಗಳು ಇಲ್ಲಿಯ ಪ್ರದೇಶದ ಸ್ವಾಧಿಪತ್ಯ ರಾಜಕೀಯದ ಅಸ್ತಿತ್ವಕ್ಕೆ ನಾಂದಿ ಹಾಡಿದವು. ಇವುಗಳು ಕನ್ನಡ ಭಾಷೆಗೆ ಆಡಳಿತ ದರ್ಜೆ ಕೊಟ್ಟ ಮೊದಲ ಸಾಮ್ರಾಜ್ಯಗಳು ಇದಕ್ಕೆ ಪುರಾವೆಯಾಗಿ ೪೫೦ರ ಹಲ್ಮಿಡಿ ಬರೆಹಗಳಿವೆ. ಇದನ್ನು ಕದಂಬ ರಾಜಮನೆತನದ ರಾಜ ಕಾಕುಸ್ಥವರ್ಮನಿಗೆ ಸಮರ್ಪಿಸಲಾಗಿದೆ. ಅಗೆಯೇ ಇತ್ತೀಚೆಗೆ ೫ನೆಯ ಶತಮಾನದ ತಾಮ್ರದ ನಾಣ್ಯ ಕದಂಬರ ರಾಜಧಾನಿ ಬನವಾಸಿಯಲ್ಲಿ ಸಿಕ್ಕಿವೆ. ಇದರ ಮೇಲೆ ಕನ್ನಡ ಲಿಪಿ ಬರಹ ಇದೆ. ಇದು ಕನ್ನಡ ಭಾಷೆ ಆಡಳಿತವಾಗಿ ಬಳಸುತ್ತಿದ್ದುದಕ್ಕೆ ಪುರಾವೆಯಾಗಿವೆ. ಶಾತವಾಹನರ ಅನಂತರ ಪ್ರಮುಖ್ಯ ಗಳಿಸಿದ ಕದಂಬ ಸಂತತಿಯನ್ನು ೩೦೦ರ ಸುಮಾರಿನಲ್ಲಿ ಸ್ಥಾಪಿಸಿದಾತ ಬ್ರಾಹ್ಮಣ ಕುಲದ ಮಯೂರವರ್ಮ. ಈಚೆಗೆ ಇವರ ರಾಜಧಾನಿ ಬನವಾಸಿ ಬಳಿಯ ಗುಡ್ಡಾಪುರದಲ್ಲಿ ದೊರಕಿದ ರವಿವರ್ಮನ ಶಾಸನದಲ್ಲಿ ಈತನ ತಂದೆ–ತಾತಂದಿರ ವಿಷಯವಾಗಿ ಕೆಲವು ಮಾಹಿತಿಗಳು ದೊರೆಕಿವೆ. ಪಲ್ಲವರಿಗೆ ಸೇರಿದ ಪ್ರದೇಶಗಳನ್ನು ಗೆದ್ದು ಕದಂಬ ರಾಜ್ಯ ಸ್ಥಾಪನೆ ಮಾಡಿದ ಅನಂತರ ಬಾಣರೇ ಮೊದಲಾದ ದೊರೆಗಳನ್ನು ಸೋಲಿಸಿದುದಾಗಿ ಇವನ ಚಂದ್ರವಳ್ಳಿಯ ಶಾಸನ ತಿಳಿಸುತ್ತದೆ. ಇವನು ಅರಸನಾದ ಮೇಲೆ ಶರ್ಮ ಹೆಸರಿನ ಸ್ಥಳದಲ್ಲಿ 'ವರ್ಮ' ಎಂಬ ಬಿರುದು ಧರಿಸಿ ಕ್ಷತ್ರಿಯನಾಗಿ ಕಾಣಿಸಿಕೊಂಡನು. ಇವನ ಅನಂತರ ಕಾಕುತ್ಸ್ಥವರ್ಮ, ಶಾಂತಿವರ್ಮ, ಮೃಗೇಶವರ್ಮ ಮುಂತಾದವರೂ ಸಿಂಹಾಸನವನ್ನೇರಿ ತಮ್ಮ

ವಂಶದ ಗೌರವನ್ನು ಹೆಚ್ಚಿಸದರು. ಇವರಲ್ಲಿ ಕಡೆಯವನಾದ ಹರಿವರ್ಮನನ್ನು ಇದೇ ವಂಶದ ಮತ್ತೊಂದು ಶಾಖೆಯ ೬ನೆಯ ಕೃಷ್ಣವರ್ಮ ಸೋಲಿಸಿ ರಾಜ್ಯವನ್ನು ಪುನರ್ ಸಂಕೀರ್ಣಗೊಳಿಸಿದ. ಎರಡು ಶತಮಾನಗಳಿಗೂ ಹೆಚ್ಚು ಕಾಲ ಆಳಿದ ಆದಿ ಕದಂಬರ ಹಲವಾರು ಶಾಸನಗಳು ಅವರ ರಾಜ್ಯ ಈಗಿನ ಬೆಳಗಾವಿ, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಜಿಲ್ಲೆಯ ಕೆಲವು ಭಾಗ ಮತ್ತು ಬಳ್ಳಾರಿ ಜಿಲ್ಲೆಯನ್ನೊಳಗೊಂಡಿದ್ದು ಅವರ ರಾಜಧಾನಿಗಳು ಕ್ರಮವಾಗಿ ಬೆಳಗಾವಿ ಜಿಲ್ಲೆಯ ಹಲಸಿ, ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಮತ್ತು ಬಳ್ಳಾರಿ ಜಿಲ್ಲೆಯ ಉಚ್ಚಂಗಿ ದುರ್ಗಗಳಿದ್ದವು. ಕರ್ನಾಟಕದ ಪ್ರಾಚೀನ ಅರಸು ಮನೆತನಗಳಲ್ಲೊಂದಾದ ಕದಂಬ ವಂಶದ ದೊರೆಗಳು ಪ್ರಾಕೃತ ಭಾಷೆಯನ್ನು ತಮ್ಮ ಶಾಸನಗಳಿಗೆ ಬಳಸುತ್ತಿದ್ದರು. ಕ್ರಮೇಣ ಸಂಸ್ಕೃತ ರಾಜಭಾಷೆಯಾಯಿತು. ಐದನೆಯ ಶತಮಾನದ ಬೇಲೂರು ತಾಲೂಕಿನ ಹಲ್ಮಿಡಿ ಶಾಸನವು ಇವರ ಕಾಲದ ಪ್ರಥಮ ಕನ್ನಡ ಶಾಸನವಾಗಿದೆ. ಇದರಿಂದ ಕದಂಬ ವಂಶದವರ ಕೋಗಳಿ ಐನೂರರ ಕೊಟ್ಟೂರನ್ನು ಕೇಂದ್ರವಾಗಿರಿಸಿಕೊಂಡು ಆಡಳಿತ ನಡೆಸುತ್ತಿದ್ದರು. ಹೀಗಾಗಿ ಇವರನ್ನು ಕೊಟ್ಟೂರು ಕದಂಬರೆಂದು ಗುರುತಿಸಬಹುದಾಗಿದೆ. ಇವರು ಆರಂಭದಲ್ಲಿ ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರ ಮಾಂಡಳಿಕರಾಗಿ ರಾಜ್ಯಭಾರ ಮಾಡಿದರು. ಕಡಬಗೆರೆಯ ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಲ್ಲಿ "ಸ್ವಸ್ತಿ ಸಮಸ್ತ ಭುವನ ಭಾಸ್ಕರ ಚರಣಾರವಿಂದಯುಗಳ ಬನವಾಸಿ ಪುರಪರಮೇಶ್ವರ ಮೃಗೇನ್ದ್ರಲಾಞ್ಛನಂ ವಾನರಧ್ವಜ ಅಶ್ವಮೇಧಾವಭೃತ...ಬದ್ದೆಕನ್ದರ್ಪ ಬೃತ್ಯ ಚಿಂತಾಮಣಿ ನನ್ನಿ ಮಾರ್ತಂಡ ಕದಂಬ ವಮಶೋದ್ಭವ ಶ್ರೀಮತ್ ಕಣ್ಣದಾರ ಮುದುದೆರ ದೇವಯ್ಯ ಮಗ ಮಾಳವಯ್ಯ" ಎಂದು ಕದಂಬ ವಂಶದ ದೇವಯ್ಯನ ಮಗ ಮಾಳವಯ್ಯನನ್ನು ಉಲ್ಲೇಖಿಸಿದೆ.

**ನಾಚಿದೇವರಸ :** (೧೦೮೫) ಚಾಲುಕ್ಯರ ತ್ರಿಭುವನಮಲ್ಲನ ಆಳ್ವಿಕೆಯ ಕಾಲದಲ್ಲಿ ಇದರಿಂದ ಕದಂಬ ರಾಜಮನೆತನವು ಕರ್ನಾಟಕದ ಪ್ರಥಮ ರಾಜಮನೆತನವಾಗಿ ಬಳ್ಳಾರಿ ಜಿಲ್ಲೆಯ ಬಹುಭಾಗವನ್ನು ಆಡಳಿತಕ್ಕೆ ಒಳಪಟಿಸಿಕೊಂಡಿತ್ತು. ಮತ್ತು ಕೂಡ್ಲಿಗಿ ತಾಲೂಕು ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ.

**ಬಾದಾಮಿ ಚಲುಕ್ಯರು :**

ಕದಂಬ-ಗಂಗರ ಅನಂತರ ಕರ್ನಾಟಕದ ಪ್ರಮುಖ ರಾಜಮನೆತನವೆಂದರೆ ಬಾದಾಮಿ ಚಲುಕ್ಯ ವಂಶ. ಇವರ ಮೂಲ ಸರಿಯಾಗಿ ಗೊತ್ತಿಲ್ಲ. ಒಂದನೆಯ ಪುಲಕೇಶಿಯ ಕಾಲದಿಂದ (ಸು. ೫೪೦) ಪ್ರಾಬಲ್ಯ ಪಡೆದ ಈ ವಂಶ ಎರಡು ಶತಮಾನಕ್ಕೂ ಹೆಚ್ಚು ಕಾಲ ಕರ್ನಾಟಕದ

ಕೀರ್ತಿ ಧ್ವಜವನ್ನು ಎತ್ತಿ ಹಿಡಿಯಿತು. ಕೀರ್ತಿವರ್ಮನಿಂದ ವಿಸ್ತೃತವಾದ ಈ ರಾಜ್ಯ ಇಮ್ಮಡಿ ಪುಲಕೇಶಿಯ ಕಾಲದಲ್ಲಿ ಕೀರ್ತಿಶಿಖರ ತಲುಪಿತು. ದಕ್ಷಿಣ ಭಾರತದ ರಾಜರುಗಳನ್ನು ಗೆದ್ದು ದಕ್ಷಿಣಾ ಪಥೇಶ್ವರನೆನಿಸಿಕೊಂಡ ಈತ ಉತ್ತರ ಭಾರತದ ಸಾಮ್ರಾಟ ಹರ್ಷನನ್ನು ನರ್ಮದಾ ತೀರದಲ್ಲಿ ಸೋಲಿಸಿ ತನ್ನ ಬಿರುದನ್ನು ಸಾರ್ಥಕಗೊಳಿಸಿಕೊಂಡ. ಹರ್ಷನ ಆಸ್ಥಾನ ಕವಿ ಬಾಣ ಮತ್ತು ಸಮಕಾಲೀನ ಚೀನಿ ಪ್ರಾವಾಸಿ ಹ್ಯೊಯನ್ ತ್ಸಾಂಗ್ ಆ ಕಾಲದ ಕರ್ನಾಟಕ ಸಾಮ್ರಾಜ್ಯದ ವೈಭವವನ್ನು ಹೊಗಳಿದ್ದಾರೆ. ಆದರೆ ಈತ ೬೪೨ರಲ್ಲಿ ಪಲ್ಲವ ನರಸಿಂಹವರ್ಮನಿಂದ ಸೋತು ಮಡಿದ. ೧೩ ವರ್ಷಗಳ ಅನಂತರ ೬೫೫ರಲ್ಲಿ ಚಾಳುಕ್ಯ ರಾಜ್ಯ ಮೊದಲನೆಯ ವಿಕ್ರಮಾದಿತ್ಯನಿಂದ ಪುನಃ ಸ್ಥಾಪಿತವಾಯಿತು. ವಿಕ್ರಮಾದಿತ್ಯ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಪಲ್ಲವ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಅದರ ದಕ್ಷಿಣದ ಎಲ್ಲೆಯಾದ ಉರಗಪುದ (ಈಗಿನ ಉರೈಯೂರು-ತಿರುಚಿನಾಪಳ್ಳಿಯ ಸಮೀಪ)ವರೆಗಿನ ಪ್ರದೇಶವನ್ನೆಲ್ಲ ೬೭೪ರಲ್ಲಿ ಜಯಿಸಿದ. ನಾನಾ ವಿಜಯಗಳಿಂದಲೂ, ಸುವ್ಯವಸ್ಥಿತ ಆಡಳಿತದಿಂದಲೂ ಆತ ಚಳುಕ್ಯ ರಾಜ್ಯ ವೈಭವವನ್ನು ಮೆರೆಸಿದ. ೯ನೆಯ ವಿಕ್ರಮಾದಿತ್ಯನು ಪಲ್ಲವರ ಮೇಲಿನ ದ್ವೇಷವನ್ನು ಮುಂದುವರಿಸಿ ತನ್ನ ಯುವರಾಜ್ಯ ಕಾಲದಲ್ಲೂ ಆಳ್ವಿಕೆಯ ಸಮಯದಲ್ಲೂ ಮೂರು ಬಾರಿ ಪಲ್ಲವ ರಾಜಧಾನಿಯಾದ ಕಂಚಿಯನ್ನು ವಶಪಡಿಸಿಕೊಂಡಿದ್ದ. ವಾಯುವ್ಯ ಗಡಿಯಲ್ಲಿ ಉಪಟಳ ಕೊಡುತ್ತಿದ್ದ ಅರಬರನ್ನು ಸೋಲಿಸಿ ಗುಜರಾತಿನಲ್ಲಿ ತನ್ನ ಅಧಿಕಾರವನ್ನು ನೆಲೆಗೊಳಿಸಿದ. ಉದಾರ ಚರಿತನಾದ ಈತ ಶತ್ರು ರಾಜಧಾನಿಯಾದ ಕಂಚಿಯ ಬ್ರಾಹ್ಮಣರಿಗೂ, ದೇವಾಲಯಗಳಿಗೂ ದನ-ಕನಕಗಳನ್ನು ವಿಪುಲವಾಗಿ ಕೊಟ್ಟುದಾಗಿ ಶಾಸನಗಳು ತಿಳಿಸುತ್ತವೆ. ವಿನಯಾದಿತ್ಯ, ವಿಜಯಾದಿತ್ಯ ಮತ್ತು ಇಮ್ಮಡಿ ವಿಕ್ರಮಾದಿತ್ಯ ಕಾಲದಲ್ಲಿ ಅತ್ಯಂತ ಉಚ್ಛಾಯ ದೆಸೆಯಲ್ಲಿದ್ದ ಈ ವಂಶದ ಅರಸರು ೭೫೭ರ ಸುಮಾರಿನಲ್ಲಿ ಈ ವಂಶದ ಕೊನೆಯ ದೊರೆ ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ರಾಷ್ಟ್ರಕೂಟರಿಗೆ ಸಾಮಂತರಾದರು.

ಬಾದಾಮಿ ಚಲುಕ್ಯರ ಕಾಲದಿಂದಲೇ ಕರ್ನಾಟಕದ ಪ್ರಬುದ್ಧವಾಯಿತೆಂದು ಅನೇಕ ಇತಿಹಾಸ ತಜ್ಞರು ಅಭಿಪ್ರಾಯಪಡುತ್ತಾರೆ. ಆ ಮೊದಲು ಇತರ ರಾಜಮನೆತನಗಳು ಅಲ್ಲಲ್ಲಿ ಆಳುತ್ತಿದ್ದರೂ ಕರ್ನಾಟಕದ ಹೆಚ್ಚು ಭಾಗ ಒಂದುಗೂಡಿ ಅದರ ಇತಿಹಾಸಕ್ಕೆ ಒಂದು ನಿರ್ದಿಷ್ಟ

ರೂಪ ದೊರೆಕಿದ್ದು ಚಳುಕ್ಯರ ಕಾಲದಲ್ಲಿ. ಇವರು ಅದರ ಸಾಂಸ್ಕೃತಿಕ ಮೇರೆಗಳನ್ನು ವಿಸ್ತರಿಸಿರುವರು. ರಾಜ್ಯದಲ್ಲಿ ಸುವ್ಯವಸ್ಥಿತ ಆಡಳಿತ ನಿರ್ಮಿಸಿದರು. ಬಾದಾಮಿ ಇವರ ರಾಜಧಾನಿ. ಎಲ್ಲ ದಿಕ್ಕುಗಳಿಗೂ ರಾಜ್ಯ ಹರಡಿತ್ತು. ಉತ್ತರದಲ್ಲಿ ನರ್ಮದಾ, ಪೂರ್ವದಲ್ಲಿ ಕರ್ನೂಲ,

ಗುಂಟೂರು ಮತ್ತು ನೆಲ್ಲೂರು ಪ್ರದೇಶಗಳು, ದಕ್ಷಿಣದಲ್ಲಿ ಕಾವೇರಿ ಮತ್ತು ಪಶ್ಚಿಮದಲ್ಲಿ ಅರಬ್ಬೀ ಸಮುದ್ರ ಇವು ರಾಜ್ಯದ ಉಚ್ಛ್ರಾಯ ಕಾಲದಲ್ಲಿ ಎಲ್ಲೆಗಳಾಗಿದ್ದವು. ಇದಲ್ಲದೆ ಈ ವಂಶಜರು ಗುಜರಾತ್ ಮತ್ತು ಆಂಧ್ರಪ್ರದೇಶಗಳಲ್ಲೂ ರಾಜ್ಯ ಸ್ಥಾಪನೆ ಮಾಡಿದರು. ಕ್ರಮೇಣ ಅವು ಸ್ವತಂತ್ರ ರಾಜ್ಯಗಳಾಗಿ ಕರ್ನಾಟಕ ಸಂಸ್ಕೃತಿಯ ಹೊರ ಕೇಂದ್ರಗಳಾದವು. ಪುರಾತನ ಕಾಲದಲ್ಲಿ ನಡೆದ ಈ ಕರ್ನಾಟಕ ಏಕೀಕರಣದಿಂದ ಜನರಲ್ಲಿ ಭಾವೈಕ್ಯತೆವುಂಟಾಯಿತು. ನಾಡಿನ ರಕ್ಷಣೆಗೆ ಸುಶಿಕ್ಷಿತವೂ, ಶಿಸ್ತಿನಿಂದ ಕೂಡಿದ್ದು ರಾಷ್ಟ್ರಕೂಟ ದಂತಿದುರ್ಗ ಕರ್ನಾಟಕ ಬಲದ ಪ್ರಸ್ತಾಪ ಮಾಡಿದ್ದಾನೆ. ಮತೀಯ, ಸಾಮಾಜಿಕ, ಭಾಷಾ, ಸಾಹಿತ್ಯ ಮತ್ತು ಕಲಾರಂಗಗಳ ಮೇಲೂ ಈ ಏಕೀಕರಣದ ಪ್ರಭಾವ ಅದ್ಭುತವಾಗಿತ್ತು. ಸಾಮಾಜಿಕ ಪಂಗಡಗಳ ಮೇಲೆ ಸಾಂಸ್ಕೃತಿಕ ಜೀವನದ ಆದರ್ಶ ಪರಿಣಾಮ ಬೀರಿ ಆತ್ಮಗೌರವವನ್ನು ವೃದ್ಧಿಗೊಳಿಸಿತು. ಹ್ಯೊಯನ್ ತ್ಸಾಂಗ್ ತಿಳಿಸಿರುವಂತೆ ಕರ್ನಾಟಕದ ಜನತೆಯ ಧರ್ಮದ ಬೇರುಗಳಾಗಿದ್ದು, ವರ್ಣಾಶ್ರಮ ಧರ್ಮಗಳನ್ನು ಪಾಲಿಸುತ್ತ ನ್ಯಾಯ ಪರರಾಗಿದ್ದರು. ಅಭಿಮಾನಿಗಳು, ಉತ್ಸಾಹಿಗಳು, ವೀರರು, ಉಪಕಾರಿಗಳಿಗೆ ಪ್ರತ್ಯುಪಕಾರಿಗಳು, ಅನ್ಯಾಯದ ದ್ವೇಷಿಗಳು, ಶರಣಾಗತರಾಗಿ ಸ್ವಾರ್ಥ ತ್ಯಾಗ ಮಾಡಬಲ್ಲವರು ಎಂದು ಇವರು ವರ್ಣಿತರಾಗಿದ್ದಾರೆ. ಸಾಧುಗೆ ಸಾಧು, ಮಾಧುರ್ಯ್ಯಂಗೆ ಮಾಧರ್ಯಂ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ ಎಂದು ಕ್ರಿ.ಶ. ೭ನೆಯ ಶತಮಾನದ ಬಾದಾಮಿ ಕಾಲದ ಶಾಸನವೊಂದು ಆಗಿನ ಕಾಲದ ಜನರ ಹೊಂದಿದ್ದ ಆದರ್ಶವನ್ನು ಹೇಳುತ್ತದೆ.

ಶೈವ, ವೈಷ್ಣವ, ಜೈನ ಮತ್ತು ಬೌದ್ಧಧರ್ಮಗಳಿಗೆ ಸಮಾನಾಶ್ರಯವಿತ್ತು. ಅತ್ಯಂತ ಪುರಾತನ ಧರ್ಮಗಳಲ್ಲೊಂದಾದ ಶೈವಧರ್ಮಕ್ಕೆ ಇವರ ಕಾಲದಲ್ಲಿ ಸಾಕಷ್ಟು ಪ್ರೋತ್ಸಾಹವಿತ್ತು. ಮಂಗಲೀಶನ ಕಾಲದಲ್ಲಿ ನಿರ್ಮಾಣವಾದ ಮಹಾಕೂಟ ದೇವಾಲಯದ ಶೈವ ಪುಣ್ಯಕ್ಷೇತ್ರವೆಂದು ೬೦೨ರ ಶಾಸನವೊಂದು ತಿಳಿಸುತ್ತದೆ. ೭೦೦ರ ಶಾಸನವೊಂದು ಕಿಗ್ಗದಲ್ಲಿ ದೊರಕಿದ್ದ ಪಾಶುಪತ ಮತದ ಪ್ರಸ್ತಾಪವನ್ನೊಳಗೊಂಡಿದೆ. ಇದರಿಂದ ಬಾದಾಮಿ ಚಾಲುಕ್ಯರು ಕರ್ನಾಟಕದ ಬಹುಭಾಗವನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡಿದ್ದು, ಇದರಲ್ಲಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕು ಕೂಡ ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ.

**ರಾಷ್ಟ್ರಕೂಟರು :**

ರಾಷ್ಟ್ರಕೂಟ ವಂಶದವರು ಮೊದಲಿಗೆ ಬಾದಾಮಿ ಚಾಲುಕ್ಯರ ಮಾಂಡಲಿಕರಾಗಿದ್ದರು. ಚಾಲುಕ್ಯ ೬ನೆಯ ವಿಕ್ರಮಾದಿತ್ಯ ಮತ್ತು ಕೀರ್ತಿವರ್ಮರ ಕಾಲದಲ್ಲಿ ಈ ವಂಶದ ದಂತಿದುರ್ಗ ಪ್ರಬಲನಾಗಿ ಸಾರ್ವಭೌಮಾಧಿಕಾರವನ್ನು ವಶಪಡಿಸಿಕೊಂಡ. ೧ನೆಯ ಕೃಷ್ಣ, ಧ್ರುವ, ೩ನೆಯ

ಗೋವಿಂದ, ಅಮೋಘವರ್ಷ, ನೃಪತುಂಗ, ೨ನೆಯ ಕೃಷ್ಣ, ೩ನೆಯ ಕೃಷ್ಣ ಮುಂತಾದ ಪ್ರಮುಖ ರಾಷ್ಟ್ರಕೂಟ ದೊರೆಗಳ ಕಾಲದಲ್ಲಿ ಕರ್ನಾಟಕ ರಾಜ್ಯವೈಭವ ಉನ್ನತ ಹಂತಕ್ಕೆ ತಲುಪಿತು. ಮಾನ್ಯಖೇಟ ಅಥವಾ ಈಗಿನ ಮಳಖೇಡ (ಗುಲ್ಬರ್ಗಾ ಜಿಲ್ಲೆ) ಇವರ ಪ್ರಧಾನ ರಾಜಧಾನಿಯಾಗಿತ್ತು. ೧ನೆಯ ಕೃಷ್ಣನ ಕಾಲದಲ್ಲಿ ಚಾಲುಕ್ಯರು ನಾಮಾವಶೇಷರಾದರು. ಆತ ಜೊತೆಗೆ ಕೊಂಕಣ, ಗಂಗ ಮತ್ತು ವೆಂಗಿ ರಾಜ್ಯಗಳನ್ನು ಗೆದ್ದು ತನ್ನ ಅಧಿಕಾರವನ್ನು ಬಲಗೊಳಿಸಿದ. ಉತ್ತರ ಭಾರತದಲ್ಲಿ ಅವ್ಯವಸ್ಥಿತವಾಗಿದ್ದ ಕನೌಜ್ ರಾಜ್ಯದ ಮೇಲೆ ಕಣ್ಣು ಹಾಕಿದ್ದ, ಮಾಳ್ವದ ಪ್ರತೀಹಾರ ವತ್ಸರಾಜ ಮತ್ತು ಬಂಗಾಲದ ಧರ್ಮಪಾಲರನ್ನು ಧ್ರುವ ಸೋಲಿಸಿ ಕನೌಜಿನಿಂದ ಕಾಶಿಯವರೆಗೂ ಕರ್ನಾಟಕದ ರಾಜ್ಯವನ್ನು ವಿಸ್ತರಿಸಿದ ವೆಂಗಿ ರಾಜ್ಯದಲ್ಲಿ ತನ್ನ ಹಸ್ತಕನಿಗೆ ರಾಜ್ಯ ಕೊಡಿಸಿ ಅನಂತರ ದಕ್ಷಿಣದಲ್ಲಿ ಗಂಗ, ಪಲ್ಲವ, ಪಾಂಡ್ಯ, ಕೇರಳಗಳ ಒಕ್ಕೂಟವನ್ನು ಎದುರಿಸಿ, ಸೆದೆಬಡಿದು ಕಂಚಿಯನ್ನು ವಶಪಡಿಸಿಕೊಂಡ. ರಾಜ್ಯಾಡಳಿತವೂ ಸುವ್ಯವಸ್ಥಿವಾಯಿತು. ಕಂಚಿಯ ರಾಜಧಾನಿಯಾದ ತಂಜಾವೂರು ರಾಷ್ಟ್ರಕೂಟರ ವಶವಾಯಿತು. ನಂತರ ರಾಮೇಶ್ವರದವರೆಗೂ ಹೋಗಿ ಅಲ್ಲಿ ತನ್ನ ಜಯಸ್ತಂಭ ನೆಡಿಸಿದ.

ಕ್ರಿಶ ಸುಮಾರು ೭೫೩ರಲ್ಲಿ ರಾಷ್ಟ್ರಕೂಟ ಅರಸ ದಂತಿದುರ್ಗನು ಚಾಲುಕ್ಯ ಅರಸ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ ಮಳಖೇಡದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಸ್ಥಾಪಿಸುತ್ತಾನೆ. ಈ ರಾಷ್ಟ್ರಕೂಟರ ಹನ್ನೊಂದು ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿದ್ದು, ಅವು ರಾಷ್ಟ್ರಕೂಟ ಮುಮ್ಮಡಿ ಇಂದ್ರ, ಮೂರನೆಯ ಕೃಷ್ಣ, ಅವನ ತಮ್ಮ ಖೊಟ್ಟಿಗೆ ಹಾಗೂ ಕೃಷ್ಣನ ಮಗ ಇಂದ್ರನ ಕಾಲವಾಗಿದೆ. ಈ ಶಾಸನಗಳು ಬಾಗಳಿ, ಕುಡಿತಿನಿ, ಕಡಬಗೆರೆ, ಚಿರಸ್ತಹಳ್ಳಿ ಮತ್ತು ಕೊಳೆಗಲ್ಲು ಗ್ರಾಮಗಳಲ್ಲಿ ದೊರೆತಿವೆ. ಈ ಕಾರಣದಿಂದ ಕರ್ನಾಟಕದ ಬಳ್ಳಾರಿ ಜಿಲ್ಲೆಯನ್ನು ರಾಷ್ಟ್ರಕೂಟರು ಕೂಡ ಆಡಳಿತವನ್ನು ನಡೆಸಿದ್ದಾರೆಂದು ತಿಳಿದುಬರುತ್ತದೆ.

**ಕಲ್ಯಾಣ ಚಾಳುಕ್ಯರು :**

ರಾಷ್ಟ್ರಕೂಟರ ಅನಂತರ ಪ್ರವರ್ಧಮಾನಕ್ಕೆ ಬಂದ ಕಲ್ಯಾಣ ಚಾಳುಕ್ಯ ವಂಶ ಕರ್ನಾಟಕದ ಕೀರ್ತಿ ಧ್ವಜವನ್ನು ಎತ್ತಿ ಹಿಡಿದು ದಕ್ಷಿಣದಲ್ಲಿ ಅತಿ ಪ್ರಬಲರಾಗಿದ್ದ ಚೋಳರೊಡನೆ ಸತತ ಹೋರಾಟ ನಡೆಸಿದುದಲ್ಲದೆ ಮಧ್ಯ ಮತ್ತು ಪಶ್ಚಿಮ ಭಾರತಗಳಲ್ಲಿ ತನ್ನ ಬಲವನ್ನು ವಿಸ್ತರಿಸಿತು. ಸತ್ಯಾಶ್ರಯ, ಇರಿವ, ಬೆಡಂಗ, ಜಯಸಿಂಹ, ಸೋಮೇಶ್ವರ, ಅಹವಮಲ್ಲ ಮತ್ತು ಇಮ್ಮಡಿ ಸೋಮೇಶ್ವರರಂಥ ಪ್ರಸಿದ್ಧ ದೊರೆಗಳ ಅನಂತರ ಸಿಂಹಾಸನವನ್ನೇರಿದ ಆರನೆಯ ವಿಕ್ರಮಾದಿತ್ಯ (೧೦೭೭-೧೧೨೭) ಕರ್ನಾಟಕದ ಅತ್ಯಂತ ಪ್ರಸಿದ್ಧ ದೊರೆ. ಚಾಳುಕ್ಯ ವಿಕ್ರಮಶಕೆಯ ಮೂಲ

ಪುರುಷನಿತನೇ. ಚೋಳ, ಲಾಟರು ಮತ್ತು ಉಚ್ಚಂಗಿಯ ಪಾಂಡ್ಯರನ್ನು ಈತ ಸದೆಬಡೆದ. ತನ್ನಣ್ಣನಾದ ಎರಡನೆಯ ಸೋಮೇಶ್ವರನನ್ನು ಮೂಲೆಗೊತ್ತಿ ಸಿಂಹಾಸನವನ್ನಾಕ್ರಮಿಸಿದ ವಿಕ್ರಮಾದಿತ್ಯ ತನ್ನ ತಮ್ಮ ಜಯಸಿಂಹನ ದಂಗೆಯನ್ನು ಹತ್ತಿಕ್ಕಿದ. ಮಾಳ್ವವನ್ನು ಮೂರು ಭಾರಿ ಜಯಿಸಿ ನರ್ಮದೆಯ ದಕ್ಷಿಣಕ್ಕಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡ. ಅನಂತರ ತನ್ನ ಸಾಮಂತರ ಪೈಕಿ ಮುಂಡರೆನಿಸಿದ್ದವರನ್ನು ಸದೆಬಡೆದ. ತನ್ನ ಬದ್ಧ ವೈರಿಯಾದ ಒಂದನೆಯ ಕುಲ್ಲೋತ್ತುಂಗ ಚೋಳನ ವಿರುದ್ಧ ಸಂಚುಹೂಡಿ ವೆಂಗಿಯಲ್ಲಿ ಚೋಳರ ಪ್ರಾಬಲ್ಯ ಮುರಿದ. ಪೂರ್ವ-ಪಶ್ಚಿಮ ಸಮುದ್ರಗಳವರೆಗೂ ಚಾಳುಕ್ಯ ರಾಜ್ಯ ವಿಸ್ತಾರಗೊಂಡಿತು. ಆದರೆ ಇವನ ಆಳ್ವಿಕೆಯ ಕಡೆಗಾಲದಲ್ಲೇ ಚಾಳುಕ್ಯ ರಾಜ್ಯದ ಅವನತಿಯೂ ಪ್ರಾರಂಭವಾಗಿ ಉತ್ತರ ಭಾಗದಲ್ಲಿ ಕಳಚೂರ್ಯರು, ದಕ್ಷಿಣದಲ್ಲಿ ಹೊಯ್ಸಳರೂ ಪ್ರಬಲರಾದರು. ಬಿಜ್ಜಳನಿಂದ ಪ್ರಾಮುಖ್ಯತೆ ಪಡೆದ ಕಳಚೂರ್ಯರು ೧೧೬೨ರಿಂದ ೧೧೮೪ರವರೆಗೂ ಸಿಂಹಾಸನವನ್ನು ತಮ್ಮ ವಶಪಡಿಸಿಕೊಂಡಿದ್ದು ಪುನಃ ಚಾಳುಕ್ಯ ೪ನೆಯ ಸೋಮೇಶ್ವರನಿಂದ ಪರಾಭವಗೊಂಡರು. ಬಿಜ್ಜಳನ ಆಳ್ವಿಕೆಯ ಮಹತ್ವವೆಂದರೆ ಅವನ ಭಂಡಾರಿಯೂ, ಮಂತ್ರಿಯೂ ಆಗಿದ್ದರೆಂದು ಹೇಳಲಾದ ವೀರಶೈವ ಧರ್ಮ ಪ್ರವರ್ಧಕ ಬಸವೇಶ್ವರರು ಅವನ ಆಸ್ಥಾನದಲ್ಲಿದ್ದರು. ೪ನೆಯ ಸೋಮೇಶ್ವರ ೧೧೯೮ರವರೆಗೆ ಆಳುತ್ತಿದ್ದ.

೧೦ನೆಯ ಶತಮಾನದ ಆದಿ ಭಾಗದಿಂದ ಹಲವು ಪ್ರದೇಶಗಳಲ್ಲಿ ಅಧಿಕಾರ ಪಡೆದಿದ್ದ ಸೇವುಣ ಅಥವಾ ದೇವಗಿರಿಯ ಯಾದವರು ಕಲ್ಯಾಣ ಚಾಳುಕ್ಯರ ಅನಂತರ ಉತ್ತರ ಭಾಗದಲ್ಲಿ ಪ್ರಬಲರಾದರು. ಆ ವಂಶದ ೪ನೆಯ ಸಿಂಘಣ, ೫ನೆಯ ಬಿಲ್ಲಮ, ೨ನೆಯ ಸಿಂಘಣ ಮುಂತಾದ ಶಕ್ತ ದೊರೆಗಳು ತಮ್ಮ ರಾಜ್ಯವನ್ನು ವಿಸ್ತರಿಸಿ ದಕ್ಷಿಣದಲ್ಲಿ ಪ್ರಬಲರಾಗಿದ್ದ ಹೊಯ್ಸಳರೊಂದಿಗೆ ಕರ್ನಾಟಕದ ಸ್ವಾಮ್ಯಕ್ಕಾಗಿ ಹೋರಾದರು. ಆ ವಂಶದ ಕೊನೆಯ ಪ್ರಸಿದ್ಧ ದೊರೆಯಾದ ರಾಮಚಂದ್ರ, ಮಹಮ್ಮದೀಯ ಅಕ್ರಮಣಕಾರರ ವಿರುದ್ಧ ಹೋರಾಡಿದ. ಕೊನೆಗೆ ದಾಳಿಕೋರ ಅಲ್ಲಾವುದ್ಧಿನನೊಂದಿಗೆ ಸಂಧಿ ಮಾಡಿಕೊಳ್ಳಬೇಕಾಯಿತು. ಪುನಃ ೧೩೦೭ರಲ್ಲಿ ಅಲ್ಲಾವುದ್ಧಿನ ಸೇನಾನಿ ಮಲಿಕ್ ಕಾಫೂರನಿಂದ ದೇವಗಿರಿ ರಾಜ್ಯ ನಾಶ ಹೊಂದಿತು. ಇದಕ್ಕೆ ಸಾಕ್ಷಿ ಎಂಬಂತೆ ಕರ್ನಾಟಕದಲ್ಲಿ ಅನೇಕ ಶಾಸನಗಳು ಸಿಗುತ್ತವೆ. ಆದ್ದರಿಂದ ಬಳ್ಳಾರಿ ಜಿಲ್ಲೆಯ ಬಹುಭಾಗವನ್ನು ಬಾದಾಮಿ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿತು ಎಂದು ಹೇಳಬಹುದು.

**ಹೊಯ್ಸಳರು :**

ಹೊಯ್ಸಳರು ಇಂದಿನ ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನ ಅಂಗಡಿ ಗ್ರಾಮದಲ್ಲಿ ಹತ್ತನೆಯ ಶತಮಾನದಲ್ಲಿ ಪ್ರಥಮವಾಗಿ ರಾಜ್ಯ ಕಟ್ಟಿದರು. ಮುಂದೆ ದ್ವಾರ ಸಮುದ್ರ ಅಥವಾ

ಇಂದಿನ ಬೇಲೂರು ತಾಲೂಕಿನ ಹಳೇಬೀಡನ್ನು ಶಾಶ್ವತ ರಾಜಧಾನಿಯಾಗಿ ಮಾಡಿಕೊಂಡರು. ಹನ್ನೊಂದನೆಯ ಶತಮಾನದ ಅಂತ್ಯದಲ್ಲಿ ಕರ್ನಾಟಕದ ದಕ್ಷಿಣ ಭಾಗದಲ್ಲಿ ಪ್ರಬಲರಾಗುತ್ತಿದ್ದ ಹೊಯ್ಸಳರು ೧೨-೧೩ನೆಯ ಶತಮಾನಗಳಲ್ಲಿ ಕರ್ನಟಕದ ಅತ್ಯಂತ ಪ್ರಮುಖ ಶಕ್ತಿಯಾಗಿ ಬಾಳಿದರು. ವಿಷ್ಣುವರ್ಧನನ (೧೧೦೮-೧೧೫೨) ತಲಕಾಡು ವಿಜಯದೊಂದಿಗೆ (೧೧೧೬) ಈ ರಾಜವಂಶದ ಉಚ್ಛ್ರಾಯ ಕಾಲ ಆರಂಭವಾಯಿತು. ಈ ವಂಶದಲ್ಲಿ ನರಸಿಂಹ, ಇಮ್ಮಡಿ ಬಲ್ಲಾಳ, ಸೋಮೇಶ್ವರ, ರಾಮನಾಥ ಮತ್ತು ಮುಮ್ಮಡಿ ಬಲ್ಲಾಳರಂಥ ಮಹಾ ವ್ಯಕ್ತಿಗಳು ತಲೆದೋರಿ ಉತ್ತರದಲ್ಲಿ ಯಾದವರನ್ನೂ, ದಕ್ಷಿಣದಲ್ಲಿ ಚೋಳ ಪಾಂಡ್ಯರನ್ನು ಹತೋಟಿಯಲ್ಲಿಟ್ಟುಕೊಂಡು ಕರ್ನಾಟಕದ ಪ್ರಸಿದ್ಧಿ ಹೆಚ್ಚಿಸಿದರು. ವಿಷ್ಣುವರ್ಧನ ಚೋಳರಿಂದ ತಲಕಾಡನ್ನು ಗೆದ್ದುಕೊಂಡ ಮೇಲೆ ಕೋಲಾರ ನಂಗಿಲಿಗಳನ್ನು ವಶಪಡಿಸಿಕೊಂಡಿದ್ದಲ್ಲದೆ ಕಂಚಿಯನ್ನೂ ಗೆದ್ದು ರಾಮೇಶ್ವರದವರೆಗೂ ಹೋಗಿ ಪಾಂಡ್ಯರೊಡನೆ ಹೋರಾಡಿದನೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಅನಂತರ ಕೊಂಗಾಳ್ವರನ್ನೂ ನಿಡಗಲ್ಲಿನ ಚೋಳರನ್ನೂ ಜಯಿಸಿದ. ಕೊಂಗು ದೇಶವನ್ನು ಗೆದ್ದು ರಾಜ್ಯ ವಿಸ್ತರಿಸಿದ. ಅನಂತರ ಉಚ್ಚಂಗಿಯ ಪಾಂಡ್ಯರನ್ನು, ಕುಮ್ಮಟವನ್ನೂ ಗೆದ್ದ. ಬೆಳ್ವೊಲ ನಾಡನ್ನು ಆಕ್ರಮಿಸಿದಾಗ ಚಾಳುಕ್ಯ ಚಕ್ರವರ್ತಿ ೬ನೆಯ ವಿಕ್ರಮಾದಿತ್ಯ ತನ್ನ ಈ ದಂಗೆಕೋರ ಸಾಮಂತನನ್ನೆದುರಿಸಿ ಸೋತುದರ ಫಲವಾಗಿ ಹೊಯ್ಸಳರು ನಿಜಕ್ಕೂ ಸ್ವತಂತ್ರರಾದರು. ಅನಂತರ ಹಾನಗಲ್ಲಿನ ಕದಂಬರೂ ಸೋತರು. ಆದರೆ ಚಾಳುಕ್ಯ ಸಾಮಂತ ಇಮ್ಮಡಿ ಆಚುಗಿ ೧೧೨೨ರಲ್ಲಿ ವಿಷ್ಣುವರ್ಧನನ್ನು ಸೋಲಿಸಿದ. ಹೊಯ್ಸಳರು ಹೆಸರಿಗೆ ಮಾತ್ರ ಸಾಮಂತರಾಗಿದ್ದರೂ, ವಾಸ್ತವವಾಗಿ ಸ್ವತಂತ್ರರಾಗಿಯೇ ಇದ್ದರು. ವಿಷ್ಣುವರ್ಧನ ೧೧೩೬ರ ಸಮಯಕ್ಕೆ ಬಳ್ಳಾರಿ ಪ್ರದೇಶದ ಅನೇಕ ಭಾಗಗಳನ್ನೂ ಬಂಕಾಪುರವನ್ನೂ ಚಾಳುಕ್ಯರಿಂದ ಗೆದ್ದುಕೊಂಡ. ಹಾನಗಲ್ಲು ಪುನರ್ವಶವಾಯಿತು.

**ವೀರನರಸಿಂಹ (ಕ್ರಿ.ಶ. ೧೦೨೧)** : ಕೊಟ್ಟೂರಿನ ಮೂರುಕಲ್ಲು ಮಠದ ಮುಂದೆ ಇರುವ ಶಾಸನವು ಇವನ ಆಳ್ವಿಕೆಯ ವಿಷಯವನ್ನು ತಿಳಿಸುತ್ತದೆ.

"ಸ್ವಸ್ತಿ ಸಮಸ್ತ ಪುಸತ್ತಿಸಹಿತಂ ಶ್ರೀಮನು ಮಹಾರಾಜಾಧಿರಾಜಂ ಪ್ರತಾಪ ಚಕ್ರವರ್ತಿ ಮಲೆರಾಜರಾಜ ಮಲಿಪದೊಳು ಗಂಡ ಕದನ ಪ್ರಚಂಡ ಯಾದವಕುಳದ್ವಿಮಣಿ ಸದ್ರಾಜಚೂಡಾಮಣಿ ಹೋಶಣ ವೀರನಾರಸಿಂಹ ದೇವರಾಜ್ಯಾಭ್ಯುದಯ ಕರಣ" ಎಂದು ವರ್ಣಿಸಿದೆ. ಇದರಿಂದ ಕೊಟ್ಟೂರು ಉಜ್ಜಿನಿ ಹತ್ತಿರದ ಪ್ರದೇಶವಾಗಿರುವುದರಿಂದ ಹೊಯ್ಸಳರು ಈ ಪ್ರದೇಶವನ್ನು ಆಡಳಿತಕ್ಕೆ ಒಳಪಡಿಸಿಕೊಂಡಿದ್ದರು ಎಂದು ತಿಳಿದುಬರುತ್ತದೆ.

**ಇಮ್ಮಡಿ ಬಲ್ಲಾಳನ (೧೧೭೩-೧೨೨೦)** : ಹೊಯ್ಸಳ ಸಾಮ್ರಾಜ್ಯ ಅತ್ಯುನ್ನತ ವೈಭವವನ್ನು ತಲುಪಿತು. ಚೆಂಗಾಳ್ವ, ಕೊಂಗಳ್ವ, ಉಚ್ಚಂಗಿ ಪಾಂಡ್ಯರನ್ನೂ, ಬನವಾಸಿ, ಹಾನಗಲ್ಲುಗಳನ್ನೂ

ಗೆದ್ದರೂ ಕಳಚುರಿ ಸಂಕಮನಿಂದ ಈತ ೧೧೭೭ರಲ್ಲಿ ಸೋತ. ಕೆಲ ಕಾಲನಂತರ ಬೆಳ್ವೊಲವನ್ನು ಗೆದ್ದ. ಸೇವುಣರೊಂದಿಗೆ ದೀರ್ಘಕಾಲ ಹೋರಾಡಿ ೧೧೯೦ರಲ್ಲಿ ಸೊರಟೂರು ಕದನದಲ್ಲಿ ಅವರನ್ನು ಸೋಲಿಸಿದ. ರಾಯಚೂರು, ಬಳ್ಳಾರಿ ಪ್ರದೇಶಗಳು ಇವನ ವಶವಾದವು. ೧೨೧೩ರಲ್ಲಿ ಸೇವುಣ ಇಮ್ಮಡಿ ಸಿಂಘಣನಿಂದ ಸೋತು ಶಿವಮೊಗ್ಗೆಯಾಚೆಯ ಪ್ರದೇಶಗಳನ್ನು ಕಳೆದುಕೊಂಡ. ತನ್ನ ಕೊನೆಗಾಲದಲ್ಲಿ ಕಷ್ಟದಲ್ಲಿದ್ದ ತನ್ನ ಬಂಧುವಾದ ಚೋಳರಾಜ ಮುಮ್ಮಡಿ ಕುಲೋತ್ತುಂಗನ ಸಹಾಯಾರ್ಥವಾಗಿ ಹೋಗಿ ಪಾಂಡ್ಯರನ್ನು ಸೋಲಿಸಿ ಚೋಳರಾಜ್ಯವನ್ನು ಭದ್ರಗೊಳಿಸಿದ. ಹೊಯ್ಸಳ ದೊರೆ ಎರಡನೆಯ ನರಸಿಂಹ ಚೋಳ ಚಕ್ರವರ್ತಿ ಮುಮ್ಮಡಿ ರಾಜನನ್ನು ಕಾಡವ ಕೋಪ್ಪೆರುಜಿಂಗನ ಸೆರೆಯಿಂದ ಬಿಡಿಸಿದುದಲ್ಲದೆ ತನ್ನ ಪ್ರಭುತ್ವವನ್ನು ತಮಿಳು ದೇಶದಲ್ಲಿ ಸ್ಥಾಪಿಸಿ, ಕಣ್ಣಾನೂರನ್ನು (ತಿರುಚಿರಾಪಳ್ಳಿಯ ಬಳಿಯಿರುವ ಈಗಿನ ಸಮಯಪುರ) ಉಪರಾಜಧಾನಿಯಾಗಿ ಮಾಡಿಕೊಂಡ. ಹೊಯ್ಸಳರು ದಕ್ಷಿಣ ಭಾರತದ ಅತ್ಯಂತ ಪ್ರಬಲ ರಾಜರಾಗಿದ್ದ ಕಾಲವಿದು. ಇಮ್ಮಡಿ ಬಲ್ಲಾಳ ಈ ಕಾರ್ಯಗಳನ್ನು ಸಾಧಿಸುವುದರ ಜೊತೆಗೆ ಮುಸ್ಲಿಂರ ದಾಳಿಗಳಿಂದ ದಕ್ಷಿಣ ಭಾರತವನ್ನೂ, ಹಿಂದೂ ಧರ್ಮವನ್ನೂ ರಕ್ಷಿಸುವ ಸಲುವಾಗಿ ಹೆಣಗಿದ. ಕರ್ನಾಟಕದ ರಾಜರಲ್ಲೆಲ್ಲ ಅತ್ಯಂತ ಪ್ರಮುಖರಲ್ಲೊಬ್ಬನೆಂದು ಕರೆಸಿಕೊಂಡಿರುವ ಈತ ತನ್ನ ರಾಜಧಾನಿಯನ್ನು ಬದಲಾಯಿಸುತ್ತ ಮುಸ್ಲಿಮರೊಂದಿಗೆ ಹೋರಾಡುತ್ತಿದ್ದು ಕಡೆಗೆ ತನ್ನ ೮೦ನೆಯ ವಯಸ್ಸಿನಲ್ಲಿ ೧೩೪೨ರಲ್ಲಿ ತಿರುಚಿನಾಪಳ್ಳಿಯಲ್ಲಿ ಮುಸ್ಲಿಮರ ಕುತಂತ್ರಕ್ಕೊಳಗಾಗಿ ಪ್ರಾಣ ತೆತ್ತ ಎಂದು ತಿಳಿದುಬರುತ್ತದೆ.

**ದೇವಗಿರಿ ಯಾದವರು** : ದೇವಗಿರಿಯ ಯಾದವರ ಶಾಸನಗಳು ಸುಮಾರು ಕ್ರಿ.ಶ. ೧೨೦೦ರಿಂದೀಚೆಗೆ ಕಾಣಿಸುತ್ತವೆ. ತುಂಗಭದ್ರಾ ನದಿ ಅಡ್ಡವಾಗಿದ್ದರಿಂದಲೂ, ಹೊಯ್ಸಳರು ಅದರಲ್ಲೂ ಮುಖ್ಯವಾಗಿ ವೀರಬಲ್ಲಾಳನ ಕಾಲದಿಂದೀಚೆಗೆ ಈ ಪ್ರದೇಶದ ಮೇಲೆ ತಮ್ಮ ಹಿಡಿತವನ್ನು ಬಲಪಡಿಸಿಕೊಂಡಿದ್ದರಿಂದ ಇವರ ಶಾಸನಗಳು ಇಲ್ಲಿ ಕಡಿಮೆ ದೊರೆಯುತ್ತವೆ.

**ಮಹದೇವ** : ಉಜ್ಜನಿ ಸಿದ್ಧೇಶ್ವರ ದೇವಾಲಯದ ಬಲಕಂಬದ ಮೇಲಿರುವ ಶಾಸನವು ಯಾದವ ಮಹಾದೇವರಾಯನು ಮಲ್ಲಿನಾಥ ದೇವರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. "ಸ್ವಸ್ತಿ...ತು ಯಾದವ ನಾರಾಯಣಂ ಭುಜಬಳಪ್ರವುಡ...ವರ್ತ್ರಿ ಶ್ರೀ ಮಹದೇವ" ಎಂದು ಉಲ್ಲೇಖಿಸಿದೆ.

**ಯಾದವ ವೀರ ಮಹಾದೇವರಾಯ** (ಕ್ರಿ.ಶ. ೧೨೬೮) : ವೀರ ಮಹಾದೇವರಾಯ ಕೊಟ್ಟೂರು ಭಾಗವನ್ನು ಆಳುತ್ತಿದ್ದ ಸಂದರ್ಭದಲ್ಲಿ ಅವನ ಅಧಿಕಾರಿ ಬೋಗಯ್ಯನು ಉಜ್ಜಿನಿಯ ಮಲ್ಲಿಕಾರ್ಜುನ ದೇವರಿಗೆ ಸುಂಕವನ್ನು ಮಾನ್ಯವಾಗಿ ಬಿಡುತ್ತಾನೆ ಎಂಬ ವಿಷಯವನ್ನು ತಿಳಿಸುತ್ತದೆ.

"ಸ್ವಸ್ತಿ ಶ್ರೀಮತು ಯಾದವ ನಾರಾಯಣಂ ಭುಜಬಳ ಪ್ರೌಢಪ್ರತಾಪ ಚಕ್ರವರ್ತಿ ವೀರ ಮಹಾದೇವರಾಯ ವಿಜಯರಾಜ್ಯೆ (ವನ್ನು ಆಳುತಿರೆ)ದಯದ" ಎಂದು ದಾಖಲಿಸುತ್ತದೆ.

**ವಿಜಯನಗರದ ಅರಸರು ಕ್ರಿ.ಶ. ೧೩೩೬-೧೬೪೬)** : ಹೊಯ್ಸಳರು ಮತ್ತು ಯಾದವರ ಆನಂತರ ಕರ್ನಾಟಕವನ್ನು ಆಳಿದವರು ವಿಜಯನಗರ ಅರಸರು. ಇವರು ಹಾಕಿಸಿರುವ ಶಾಸನಗಳು ದಕ್ಷಿಣ ಭಾರತದಾದ್ಯಂತ ದೊರೆತಿವೆ. ಕೂಡ್ಲಿಗಿ ತಾಲೂಕಿನಲ್ಲಿಯೂ ಇವರ ಅನೇಕ ಶಾಸನಗಳು ದೊರಕಿವೆ. ಇವುಗಳಲ್ಲಿ ಬಹುತೇಕ ದಾನಶಾಸನಗಳು. ಆರಂಭದ ಅರಸರು ಅಂದರೆ ಸಂಗಮ ವಂಶದ ಅರಸರ ಶಾಸನಗಳು ದೊರೆಯುವುದು ಕಡಿಮೆ. ತುಳುವ ಮನೆತನದ ಶಾಸನಗಳಲ್ಲಿ ಕೃಷ್ಣದೇವರಾಯ, ಅಚ್ಯುತರಾಯ ಹಾಗೂ ಸದಾಶಿರಾಯನ ಕಾಲದ ಶಾಸನಗಳು ಹೆಚ್ಚಾಗಿ ದೊರೆಯುತ್ತದೆ.

**ದೇವರಾಯ ಮಹಾರಾಜ (ಕ್ರಿ.ಶ. ೧೪೩೬)** : ವಿಜಯನಗರದಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಮಯದಲ್ಲಿ ಲಕುಪನ ಮಗ ಹರಿಯಣನು ಪಾಂಡ್ಯನಾಡ ನೊಣುಬರಸಿ ಕೆರೆಯನ್ನು ಆಳುತ್ತಿದ್ದಾಗ ಹರಿಯಣ್ಣನು ಹರಿಯ ಸಮುದ್ರ ಗ್ರಾಮವನ್ನು ಶ್ರೋತ್ರಿಯ ಅಗ್ರಹಾರವಾಗಿ ದಾನ ನೀಡುತ್ತಾನೆ. ರಾಜಾಭಾವನ ಹಳ್ಳಿಯಲ್ಲಿರುವ ಶಾಸನ ಇದನ್ನು ಉಲ್ಲೇಖಿಸುತ್ತದೆ.

"ಸ್ವಸ್ತಿ ಜಯಾಭ್ಯುದಯ ಶಕವರುಷ ೧೩೪೧ ಸಂದು ವರ್ತ್ತಮಾನ ವಿಕಾರಿ ಸಂವತ್ಸರ ಕಾರ್ತಿಕ ಶು(೧೧) ಆದಿವಾರದಲು ಶ್ರೀಪಂಪಾವಿರೂಪಾಕ್ಷ ದೇವರ ಸಂವಿಧಿಯಲು ವಿಜಯನಗರಿಯ ನೆಲೆವೀಡಿಸಲು ಸುಕಸಂಕಥಾ ವಿನೋದದಿಂ ಸಕಳ ರಾಜ್ಯವ...ದನು ಪ್ರತಿಪಾ(ಲಿಸು)ತ್ತಮಿರ್ದಲ್ಲಿ" ಎಂದು ದಾಖಲಿಸಿದೆ.

**ಕೃಷ್ಣದೇವರಾಯ (ಕ್ರಿ.ಶ. ೧೫೧೦-೧೫೨೮)** : ಕೃಷ್ಣದೇವರಾಯ ವಿಜಯನಗರದಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಮಲ್ಲಪಂಣನು ಮೊರಬದಲ್ಲಿ ತನ್ನ ತಾಯಿಗೆ ಪುಣ್ಯವಾಗಲೆಂದು ದೇವರಿಗೆ ಭೂದಾನ ನೀಡಿದ ವಿಷಯ ಒಂದು ಶಾಸನದಲ್ಲಿದೆ.

"ಶ್ರೀಮ(ಂ)ನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀವೀರಪ್ರತಾಪ ವೀರಕೃಷ್ಣರಾಯರು ಪೃಥ್ವೀ ರಾಜ್ಯಂಗೈಉತ್ತ(ಮಿರೆ)"

**ಅಚ್ಯುತದೇವ ಮಹಾರಾಯ (೧೫೩೯-೧೫೪೨)** : ಇವನ ಆಳ್ವಿಕೆಯ ಸಂದರ್ಭದಲ್ಲಿ ಉಜ್ಜನಿಯ ಸಿದ್ಧೇಶ್ವರ ದೇವರಿಗೆ ಆನಂದ ನಿಧಿಯನ್ನು ದಾನವಾಗಿ ಕೊಡುತ್ತಾನೆ ಎಂದು ಉಲ್ಲೇಖವಿದೆ. "ಶ್ರೀಮ...ರಾಜಾಧಿರಾಜ ರಾ(ಜ) ಪರಮೇಶ್ವರ ಶ್ರೀ

ಅಚುತರಾಯ ಮಹಾ(ರಾಯ)ರು ಮಾಡಿದ ದಾನ ಸ್ಲೋಕ" ಎಂದಿದೆ.

**ಸದಾಶಿವರಾಯ (ಕ್ರಿ.ಶ. ೧೫೪೨–೧೫೬೨)** : ಈತನು ವಿಜಯನಗರದಲ್ಲಿ ರಾಜ್ಯಭಾರ ಮಾಡುತ್ತಿರುವ ಸಂದರ್ಭದಲ್ಲಿ ತಿಮ್ಮಪ್ಪ ನಾಯಕನ ಮಗ ರಾಮಪ್ಪ ನಾಯಕನು ದೇವಲಾಪುರ ವಸಂತಮಲ್ಲಿಕಾರ್ಜುನ ದೇವರಿಗೆ ಎರಡು ಡೋಲು, ಎರಡು ನಾಗಸ್ವರ ದಾನಕೊಟ್ಟ ವಿಷಯವನ್ನು ದೇವಲಾಪುರ ಶಾಸನವು ಉಲ್ಲೇಖಿಸಿದೆ.

ಕ್ರಿ.ಶ. ೧೫೪೮ರ ಶಾಸನ ಸದಾಶಿರಾಯನ ಆಳ್ವಿಕೆಯ ಸಂದರ್ಭದಲ್ಲಿ ಅವನ ಮಹಾಮಂಡಳೇಶ್ವರ ರಾಮರಾಜನು ಕೊಟ್ಟೂರು ಸೀಮೆಯವರಿಗೆ ಕಡ್ಡಾಯ, ಬೆಟ್ಟಿ, ಕೊಟ್ಟಣ ಮುಂತಾದ ತೆರೆಗೆಗಳನ್ನು ದಾನವಾಗಿ ಬಿಟ್ಟ ವಿಷಯ ತಿಳಿಸುತ್ತದೆ.

**ರಾಮರಾಜ ಮತ್ತು ತಿಮ್ಮರಾಜ ಮಹಾ ಅರಸ (ಕ್ರಿ.ಶ. ೧೫೮೦)** : ಶಾಸನದಲ್ಲಿ ರಾಮರಾಜ ಮತ್ತು ಅವನ ಮಗ ತಿಮ್ಮರಾಜ ಮಹಾ ಅರಸು ಇವರಿಬ್ಬರ ಹೆಸರು ಉಲ್ಲೇಖವಾಗಿದೆ. ಈ ಸಂದರ್ಬದಲ್ಲಿ ರಾಮರಾಜನ ಮಗ ತಿಮ್ಮರಾಜ ಮಹಾ ಅರಸು ಆನೆಗೊಂದಿಯಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಇವನ ಕಾರ್ಯಕರ್ತನಾದ ಬಾಗಳಿ ಮಾಚಿನಾಯಕನ ಮಗ ಮಾದಿನಾಯಕನು ಕೊಟ್ಟೂರು ಸೀಮೆಯ ಕುರುಬರಿಗೆ ಕುರಿ ತೆರಿಗೆಯನ್ನು ಬಿಡುತ್ತಾನೆ. ಈ ವಿಷಯವು ಒಂದು ಶಾಸನದಲ್ಲಿ ಉಲ್ಲೇಖವಾಗಿದೆ.

**ಬಯಕಾರ ರಾಮಪ್ಪ (ಕ್ರಿ.ಶ. ೧೫೫೬)** : ಕೃಷ್ಣದೇವರಾಯ ಮತ್ತು ಅಚ್ಯುತ ದೇವರಾಯನ ಕಾಲಲ್ಲಿ ಉನ್ನತ ಹುದ್ದೆಯಲ್ಲಿದ್ದ ಬಯಕಾರ ರಾಮಪ್ಪ ನಂತರ ರಾಮರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ನಾಶವಾದ ನಂತರವೂ ಅನೇಕ ಸಮಾಜೋದ್ಧಾರಕ ಕೆಲಸಗಳನ್ನು ಮಾಡಿದ್ದಾನೆ. ಬಯಕಾರ ರಾಮಪ್ಪನ ಮಗಳು ಅಚ್ಯುತಮ್ಮನ ನೆನಪಿಗಾಗಿ ಬಾಲಕೃಷ್ಣ ದೇವರಗುಡಿ ಮತ್ತು ಅಚ್ಯುತಂಮಾಪುರ ಗ್ರಾಮವನ್ನು ನಿರ್ಮಿಸಿದ ಎಂಬ ವಿಷಯ ಹುಲಿಗಂಟ ಗ್ರಾಮದಲ್ಲಿ ದೊರೆತ ಶಾಸನದಿಂದ ತಿಳಿದುಬರುತ್ತದೆ. ಇವನು ತನ್ನ ಕುಟುಂಬದವರ ಹೆಸರಿನಲ್ಲಿ ೧೬ ಕೆರೆಗಳನ್ನು ಕಟ್ಟಿಸುತ್ತಾನೆ ಎಂದು ಶಾಸನ ತಿಳಿಸುತ್ತದೆ.

**ಆಡಳಿತ ವಿಭಾಗಗಳು :**

ಬಳ್ಳಾರಿ ಜಿಲ್ಲೆ ಹಿಂದೆ ಎರಡು ಪ್ರಮುಖ ಆಡಳಿತ ವಿಭಾಗಗಳಲ್ಲಿ ಹಂಚಿ ಹೋಗಿತ್ತು. ಈಗಿನ ಹೊಸಪೇಟೆ, ಸಿರುಗುಪ್ಪ, ಬಳ್ಳಾರಿ ಮತ್ತು ಸಂಡೂರು ತಾಲೂಕಿನ ಕೆಲವು ಗ್ರಾಮಗಳು ಸಿಂದವಾಡಿ ವಿಭಾಗಕ್ಕೆ ಸೇರಿದ್ದವು. ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಹರಪನಹಳ್ಳಿ ತಾಲೂಕಿನ ಕೆಲವು ಗ್ರಾಮಗಳು ಕೋಗಳಿ ವಿಭಾಗಕ್ಕೆ ಒಳಪಟ್ಟಿದ್ದವು.

ವಿಸ್ತಾರವಾದ ಪ್ರದೇಶದ ಆಡಳಿತ ನಿರ್ವಹಣೆ ಒಬ್ಬ ವ್ಯಕ್ತಿಗೆ ಕಷ್ಟಕರವಾಗಿದ್ದು. ಹೀಗಾಗಿ ಆಡಳಿತ ಸೌಕರ್ಯಕ್ಕಾಗಿ ರಾಷ್ಟ್ರವನ್ನು ರಾಜ್ಯ, ವಿಭಾಗ, ಜಿಲ್ಲೆ, ತಾಲೂಕು, ಫಿರ್ಕ, ಗ್ರಾಮವೆಂದು

ವಿಭಾಗಿಸಿ ಅವುಗಳ ಮೇಲೆ ಕ್ರಮವಾಗಿ ರಾಷ್ಟ್ರಪತಿ, ರಾಜ್ಯಪಾಲ, ವಿಭಾಗಾಧಿಕಾರಿ, ಜಿಲ್ಲಾಧಿಕಾರಿ, ತಹಶೀಲ್ದಾರ, ಜಿಲ್ಲೆದಾರ, ಗ್ರಾಮ ಲೆಕ್ಕಾಧಿಕಾರಿ ಇದ್ದಾರೆ. ಇದೇ ರೀತಿ ಪ್ರಾಚೀನ ಕಾಲದಲ್ಲಿ ಸಾಮ್ರಾಜ್ಯವನ್ನು ದೊಡ್ಡ ವಿಭಾಗಗಳನ್ನಾಗಿಯೂ ಈ ದೊಡ್ಡ ವಿಭಾಗವನ್ನು ಸಣ್ಣ ಉಪ ವಿಭಾಗಗಳನ್ನಾಗಿಯೂ ವಿಂಗಡಿಸಿ ಅವುಗಳ ಆಡಳಿತ ನೋಡಲು ಪ್ರಭು ವರ್ಗದವರನ್ನು ಚಕ್ರವರ್ತಿಗಳು ನೇಮಿಸುತ್ತಿದ್ದರು.

ಪ್ರಸ್ತುತ ಅಧ್ಯಯನದ ಪ್ರದೇಶವಾದ ಕೂಡ್ಲಿಗಿ ತಾಲೂಕು ನೊಳಂಬವಾಡಿ ೩೨೦೦೦, ಕೋಗಳಿ ೫೦೦, ಕೊಟ್ಟೂರು ೧೨ ಈ ವಿಭಾಗಗಳಿಗೆ ಒಳಪಟ್ಟಿತ್ತೆಂದು ಇಲ್ಲಿ ದೊರೆಯುವ ಶಾಸನಗಳ ಆಧಾರದ ಮೇಲೆ ಸ್ಪಷ್ಟಪಡಿಸಲಾಗಿದೆ.

**ನೊಳಂಬವಾಡಿ ೩೨೦೦೦ :** ಬಳ್ಳಾರಿ ಜಿಲ್ಲೆಯ ಸಮಗ್ರ ಭಾಗ ನೊಳಂಬವಾಡಿ ೩೨೦೦೦ ವಿಭಾಗಕ್ಕೆ ಸೇರಿತ್ತು. ತಮಿಳಿನಲ್ಲಿ 'ನೊಳಂಬವಾಡಿ' ಎಂಬುದು ದೊಡ್ಡ ವಿಭಾಗವನ್ನು ನಿರ್ದೇಶಿಸುತ್ತದೆ. ಹಿಂದೆ ನೊಳಂಬವಾಡಿಯನ್ನು ಪಲ್ಲವರು, ನೊಳಂಬರೆಂಬ, ನೊಣಂಬರು ಎಂದು ಕರೆಯಲಾಗುತ್ತಿತ್ತು. ದೊಡ್ಡ ವಿಭಾಗವಾಗಿದ್ದರಿಂದ ಮತ್ತು ಅದನ್ನು ಆಳುವವರನ್ನು ಅದೇ ಅರ್ಥದಲ್ಲಿ ಕರೆಯುತ್ತಿದ್ದುದರಿಂದ ಈ ವಿಭಾಗಕ್ಕೆ ನೊಳಂಬವಾಡಿ ಎಂಬ ಹೆಸರು ಬಿದ್ದಿತು.

ಪೆಂಜೇರು ಅಥವಾ ಹಂಜೇರು ಎಂಬುದರಿದರ ಪ್ರಾಚೀನ ರಾಜಧಾನಿ. ಈಗಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಹೇಮಾವತಿ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಅನಂತರ ಹೊಸಪೇಟೆ ತಾಲೂಕಿನ ಕಂಪ್ಲಿ ರಾಜಧಾನಿಯಾಯಿತು. ಮುಂದೆ ಪಾಂಡ್ಯರ ಕಾಲದಲ್ಲಿ ಉಚ್ಚಂಗಿದುರ್ಗ ರಾಜಧಾನಿಯಾಯಿತು. ರಾಷ್ಟ್ರಕೂಟರ ಕಾಲದಲ್ಲಿ ಚಿಕ್ಕ ವಿಭಾಗವಾಗಿದ್ದ ನೊಳಂಬವಾಡಿ ಮುಂದೆ ೩೨೦೦೦ ಗ್ರಾಮಗಳನ್ನೊಳಗೊಂಡ ದೊಡ್ಡ ವಿಭಾಗವಾಯಿತು. ಈ ವಿಭಾಗವು ಈಗಿನ ಬಳ್ಳಾರಿ, ಚಿತ್ರದುರ್ಗ, ತುಮಕೂರು, ಶಿವಮೊಗ್ಗ ಜಿಲ್ಲೆಗಳ ಕೆಲವು ಗ್ರಾಮಗಳನ್ನು ಆಂಧ್ರಪ್ರದೇಶದ ಅನಂತಪುರ, ಕರ್ನೂಲ ಜಿಲ್ಲೆಯ ಕೆಲವು ಗ್ರಾಮಗಳನ್ನು ಒಳಗೊಂಡಿತ್ತು. ಬಳ್ಳಾರಿ ಜಿಲ್ಲೆಯ ಪ್ರದೇಶಗಳನ್ನೊಳಗೊಂಡ ಈ ವಿಭಾಗದ ಉಪವಿಭಾಗಗಳೆಂದರೆ ಸಿಂದವಾಡಿ ೧೦೦೦, ಕದಂಬಳಿಕೆ ೧೦೦೦, ಕೋಗಳಿ ೫೦೦ ಮುಂತಾದವು.

ಕೊಟ್ಟೂರು ಗ್ರಾಮದ ಪಾಳುಕಲ್ಲೇಶ್ವರ ದೇವಾಲಯದ ಮುಂಬದಿಯಲ್ಲಿರುವ ಶಾಸನವು ಕ್ರಿ.ಶ. ೧೧೧೨ ಚಾಲುಕ್ಯ ವಿಕ್ರಮ ವರ್ಷ ೩೬ನೆಯ ನಂದನ, ವೈಶಾಖ, ಕು.೩, ಬೃಹಸ್ಪತಿವಾರ, ಉತ್ತರಾಯಣ ಸಂಕ್ರಾಂತಿಗೆ ಸರಿ ಹೊಂದುವ ೧೧೧೨ ಸೋಮವಾರದಂದು ಚಾಲುಕ್ಯ ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ಅವನ ಮಂಡಳೇಶ್ವರನಾದ ತ್ರಿಭುವನಮಲ್ಲ ಪಾಂಡ್ಯ ದೇವನು ನೊಳಂಬವಾಡಿಯ ೩೨೦೦೦ನ್ನು ಆಳುತ್ತಿದ್ದನು ಎಂದು ಈ ಶಾಸನವು ಉಲ್ಲೇಖಿಸುತ್ತದೆ.

ಕೊಟ್ಟೂರಿನ ಹಾಳುಗದ್ದೆ ಕಲ್ಲೇಶ್ವರ ದೇವಾಲಯದಲ್ಲಿರುವ ಮತ್ತೊಂದು ಶಾಸನ ಇವು ಚಾಲುಕ್ಯ ತ್ರಿಭುವನಮಲ್ಲನ ಕಾಲಕ್ಕೆ (ಕ್ರಿ.ಶ. ೧೧೧೨) ಸೇರಿದ್ದು, ಇವನ ಸಾಮಂತನಾದ ತ್ರಿಭುವನಮಲ್ಲ ಪಂಡ್ಯ ದೇವನು ನೊಳಂಬವಾಡಿ ೩೨೦೦೦ ವಿಭಾಗವನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.

**ಕೋಗಳಿ ೫೦೦ :** ಕೋಗಳಿಯನ್ನು ರಾಜಧಾನಿಯಾಗಿ ಹೊಂದಿ ಅದರ ಸುತ್ತಮುತ್ತಲ ೫೦೦ ಗ್ರಾಮಗಳನ್ನೊಳಗೊಂಡ ವಿಭಾಗವೇ ಕೋಗಳಿ ೫೦೦. ಈಗ ಕೋಗಳಿ ಹಗರಿಬೊಮ್ಮನಹಳ್ಳಿ ತಾಲೂಕಿನ ಚಿಕ್ಕ ಗ್ರಾಮ. ಆದರೆ ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ನಗರವಾಗಿ ೨೫೦೦ ಗ್ರಾಮಗಳಿಗೆ ರಾಜಧಾನಿಯಾದ ಇದು ಜೈನರ ಕೇಂದ್ರವಾಗಿ ಜನಪ್ರಿಯವಾಗಿತ್ತು. ಕ್ರಿ.ಶ. ೫೨೭–೫೭೦ರವರೆಗೆ ಆಳಿದ ಗಂಗ ದೊರೆ ದುರ್ವಿನೀತನು ಕೋಗಳಿಯಲ್ಲಿ ಬಸದಿಯನ್ನು ನಿರ್ಮಿಸಿದುದನ್ನು ತಿಳಿಸುತ್ತದೆ. ಅಲ್ಲದೆ ಕನ್ನಡದ ಉಪಲಬ್ದ ಪ್ರಥಮ ಗದ್ಯ ಕೃತಿ 'ವಡ್ಡಾರಾಧನೆ'ಯಲ್ಲಿ 'ಕೋಗಳಿ'ಯ ಪ್ರಸ್ತಾಪವಿದೆ.

ಶಾಸನಗಳು ಕೋಗಳಿ ನಾಡನ್ನು ಸೊಗಸಾಗಿ ವರ್ಣಿಸಿವೆ. ಮೋರಿಗೇರಿಯ ಶಾಸನ 'ವಾರಿಧಿ ಪರಿವೃತ ಧಾತ್ರೀ ನಾರಿಯ ವದನವೊತಿಸದ ಕೋಗಳಿ ನಾಡು' ಎಂದಿದೆ. ಸಮುದ್ರದಿಂದ ಆವೃತವಾಗಿರುವ ಭೂಮಿ ಎಂಬ ಸುಂದರ ಸ್ತ್ರೀಯ ಮುಖದಂತೆ ಕೋಗಳಿನಾಡು ಶೋಭಾಯಮಾನವಾಗಿ ಕಂಗೊಳಿಸುತ್ತಿತ್ತು. ಅಂಬಲಿ ಶಾಸನ ಕುಂತಳ ದೇಶವೆನ್ನುವ ಮುಖಕ್ಕೆ ಮೂಗಿನಂತೆ ನೊಳಂಬವಾಡಿ ನಾಡು ಇದ್ದರೆ ಆ ನೊಳಂಬವಾಡಿ ನಾಡಿಗೆ ದೃಷ್ಟಿಯಾಗಿ (ಕಣ್ಣುಗಳಂತೆ) ಕೋಗಳಿ ನಾಡು ಮುಖ್ಯವಾಗಿತ್ತು. ಈ ಕೋಗಳಿ ನಾಡಿಗೆ ತಿಲಕದ ಬೊಟ್ಟಿನಂತೆ ಅಂಬಳೆ ಗ್ರಾಮ ಅಮರಾವತಿಯಂತೆ ಶೋಭಿಸುತ್ತಿತ್ತು ಎಂದು ವರ್ಣಿತವಾಗಿದೆ.

ಕೋಗಳಿ ವಿಭಾಗ ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಕೂಡ್ಲಿಗಿ ಹಾಗೂ ಹರಪನಹಳ್ಳಿ ತಾಲೂಕಿನ ಗ್ರಾಮಗಳನ್ನು ಒಳಗೊಂಡಿತ್ತು. ಕೂಡ್ಲಿಗಿ ತಾಲೂಕಿನಲ್ಲಿ ದೊರೆತಿರುವ ಕೆಲವು ಶಾಸನಗಳಲ್ಲಿ ಇದರ ಉಲ್ಲೇಖ ಬರುತ್ತದೆ.

ಕೊಟ್ಟೂರು ಗ್ರಾಮದ ಪಳು ಕಲ್ಲೇಶ್ವರ ದೇವಾಲಯದ ಮುಂಬದಿಯಲ್ಲಿರುವ ಶಾಸನವು ಕ್ರಿ.ಶ. ೧೧೧೨ ಚಾಲುಕ್ಯ ತ್ರಿಭುವನಮಲ್ಲನ ಆಳ್ವಿಕೆಯ ಕಾಲದ್ದು. ಇವನ ಸಾಮಂತ ತ್ರಿಭುವನಮಲ್ಲ ಪಾಂಡ್ಯ ದೇವನು ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದ. ಈ ಸಂದರ್ಭದಲ್ಲಿ ಕದಂಬ ವಂಶದ ಘಟ್ಟಿಯರಸನು ಕೋಗಳಿ ೫೦೦ನ್ನು ಆಳುತ್ತಿದ್ದನು.

**ಕೊಟ್ಟೂರು ೧೨ :** ಹನ್ನೆರಡು ಗ್ರಾಮಗಳ ಚಿಕ್ಕ ವಿಭಾಗದ ಉಲ್ಲೇಖ ಕೂಡ್ಲಿಗಿ ತಾಲೂಕಿನ ಹಳ್ಯ ಶಾಸನದಲ್ಲಿ "ನಾಚಿದೇವರಸನು ಕೋಗಳಿಯಯ್ನೂರುಮಂ ಕೊಟೂರರ್ಪನ್ನೆರಡುಮಂ" ಆಳುತ್ತಿದ್ದನೆಂದು ಹೇಳಲಾಗಿದೆ. ಇದೇ ಶಾಸನದಲ್ಲಿ ಮುಂದೆ "ಕುಂತಳ ದೇಷದೊಳು

ಮುಖಾಂಬೋರುಹದಲ್ಲಿ ನಾಸಿಕಮೆನಿಪ್ಪ ನೊಳಂವಾಡಿಯೊಳು ಸಾರಮೆನಿಪ್ರ ದ್ರಿಷ್ಟಿಯೆನಿ ಪಂಚಶತಂ ತಾನೆ ಕೊಟೂಕಿಸೆದಿರ್ಪ್ಪುದಿಂದ್ರ ನಮರಾವತಿಯನ್ತೆವೊಲೆನ್ತು ನೋರ್ಪಡಂ" ಎಂಬ ಉಲ್ಲೇಖ ಬರುತ್ತದೆ. ಈ ಶಾಸನ ಕ್ರಿ.ಶ. ೧೧೫೪ ತ್ರಿಭುವನಮಲ್ಲನ ಕಾಲದ್ದು. ಇವನ ಸಾಮಂತನಾದ ನಾಚಿದೇವರನು ಕೋಗಳಿ–೫೦೦ ಕೊಟೂರು ೧೨ನ್ನು ಕೊಟ್ಟೂರಿನಿಂದ ಆಳುತ್ತಿದ್ದನೆಂದು ಈ ಶಾಸನ ತಿಳಿಸುತ್ತದೆ. ಇದು ಹಳ್ಳ ಗ್ರಾಮದ ಹನುಮಂತ ದೇವರ ಗುಡಿಯ ಮುಂದೆ ಇದೆ.

ಕುಂತಳದಲ್ಲಿ ನೊಳಂಬವಾಡಿ–೩೨೦೦೦ ವಿಭಾಗ ಈ ವಿಭಾಗದಲ್ಲಿ ಕೋಗಳಿ–೫೦೦ ಉಪವಿಭಾಗ. ಈ ಉಪವಿಭಾಗದಲ್ಲಿ ಅಮರಾವತಿಯಂತೆ (ಇಂದ್ರನ ರಾಜಧಾನಿ) ಕೊಟೂರು ಇತ್ತು ಎಂದು ಮೇಲಿನ ಶಾಸನದಿಂಸ ಗೊತ್ತಾಗುತ್ತದೆ. ನಾಚಿದೇವರಸನಿಗೆ ಕೊಟ್ಟುರು ರಾಜಧಾನಿಯಾಗಿತ್ತು. ಈ ಕೊಟೂರು ಈಗಿನ ಕೊಟ್ಟೂರು ಆಗಿದೆ.

ಕೊಟ್ಟೂರು ಗ್ರಾಮದ ನಾಗರಾಜ ದೇವಾಲಯದ ಬಲಭಾಗದಲ್ಲಿದೆ. ಕ್ರಿ.ಶ. ೧೧೧೩ ಚಾಳುಕ್ಯ ತ್ರಿಭುವನಮಲ್ಲನ ಸಾಮಂತನಾದ ಕದಂಬ ವಂಶದ ನಾಚಿದೇವನ ಮಗ ಘಟ್ಟಿ ದೇವರನು ಕೊಟ್ಟೂರು–೧೨ ಮತ್ತು ಕೋಗಳಿ–೫೦೦ ಭಾಗವನ್ನು ಆಳುತ್ತಿದ್ದರು.

**ಮಹಾಮಂಡೇಶ್ವರರು :**

'ಮಹಾಮಂಡೇಶ್ವರ' ಶಬ್ದಶಃ ಅರ್ಥ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗದ ಒಡೆಯ ಮಹಾಮಂಡೇಶ್ವರರು ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ವಿಭಾಗಗಳನ್ನು ಆಳುತ್ತಿದ್ದರು. ಚಕ್ರವರ್ತಿಯೊಬ್ಬನಿಗೆ ತನ್ನ ವಿಸ್ತಾರವಾದ ಸಾಮ್ರಾಜ್ಯವನ್ನು ಆಳುವುದು ಕಷ್ಟದ ಕೆಲಸವಾಗಿತ್ತು. ಹೀಗಾಗಿ ಸಾಮ್ರಾಜ್ಯದ ವಿವಿಧ ವಿಭಾಗಗಳಿಗೆ ತನಗೆ ಆಪ್ತರಾದವರನ್ನು ನಿಷ್ಟೆಯಿಂದ ಇರುವವರನ್ನು 'ಮಹಾಮಂಡೇಶ್ವರ'ರೆಂದು ನೇಮಿಸುತ್ತಿದ್ದರು. ಪರಂಪರಾಗತವಾಗಿ ಆಳುತ್ತಾ ಬಂದವರು ಚಕ್ರವರ್ತಿಗೆ ನಿಷ್ಠೆಯಿಂದ ಇದ್ದರೆ ಅವರೇ ಮಹಾಮಂಡೇಶ್ವರರಾಗಿ ಮುಂದುವರಿಯುತ್ತಿದ್ದರು. ಇಲ್ಲದಿದ್ದರೆ ಆ ಸ್ಥಾನಕ್ಕೆ ಬೇರೆಯವರ ನೇಮಕ ಮಾಡುತ್ತಿದ್ದನು.

**ತ್ರಿಭುವನಮಲ್ಲ ಪಾಂಡ್ಯದೇವ :**

ಈತನು ತ್ರಿಭುವನಮಲ್ಲ ರಾಯಪಾಂಡ್ಯನ ಪುತ್ರನಾಗಿದ್ದಾನೆ. ಅಂಬಳಿ ಶಾಸನದಲ್ಲಿ ಈತನನ್ನು'ತ್ರಿಭುವನಮಲ್ಲದೇವ ಪಾದಬ್ಜಬ್ರಿಂಗಂ' ಎಂದು ಕರೆಯಲಾಗಿದೆ. ಇವನು ನೊಳಂಬವಾಡಿ–೩೨೦೦೦ವನ್ನು ಕೇಸವುರದ ನೆಲೆವೀಡಿನಿಂದ ಆಳುತ್ತಿದ್ದನೆಂದು ಹೇಳಲಾಗಿದೆ. ರಾಗಿಮಸಲವಾಡ ಶಾಸನ ನೊಳಂಬವಾಡಿ–೩೨೦೦೦ ಮಾತ್ರವಲ್ಲದೆ ಗಂಗವಾಡಿ–೯೬೦೦೦ವನ್ನು ಆಳುತ್ತಿದ್ದನೆಂದು ಹೇಳಿದರೆ, ಹೂವಿನಹಡಗಲಿ ಶಾಸನ ನೊಳಂಬವಾಡಿಯ ಜೊತೆಗೆ ಮಾಸವಾಡಿ–೧೪೦ನ್ನು

ಆಳುತ್ತಿದ್ದನೆಂದು ಹೇಳುತ್ತದೆ. ಸಿರುಗುಪ್ಪ, ಅಂಬಳಿ, ಬಾಗಳಿ ಕೊಟ್ಟೂರಿನ ಶಾಸನಗಳು ಈತನು ಆಳುತ್ತಿರುವುದನ್ನು ನಿರೂಪಿಸುತ್ತದೆ.

ಕೊಟ್ಟೂರಿನ ಕ್ರಿ.ಶ. ೧೧೧೩ ಶಾಸನವು ಚಾಳುಕ್ಯ ತ್ರಿಭುವನಮಲ್ಲ ದೇವನ ಸಾಮಂತನಾದ ತ್ರಿಭುವನಮಲ್ಲ ಪಾಂಡ್ಯದೇವನು ಕೇಸಮುರದ ನೆಲೆವೀಡಿನಿಂದ ರಾಜ್ಯವಾಳುತ್ತಿರುವುದಾಗಿ ತಿಳಿಸುತ್ತದೆ.

ಕೊಟ್ಟೂರಿನ ಕಲ್ಲೇಶ್ವರ ದೇವಾಲಯದಲ್ಲಿರುವ ತ್ರಿಭುವನಮಲ್ಲನ (ಚಾಳುಕ್ಯ ಆರನೆಯ ವಿಕ್ರಮಾದಿತ್ಯ) ಕಾಲದ ಶಾಸನವು ಅವನ ಸಾಮಂತನಾದ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.

ಅದೇ ದೇವಾಲಯದಲ್ಲಿರುವ ಚಾಳುಕ್ಯ ತ್ರಿಭುವನಮಲ್ಲ ದೇವನ ಕ್ರಿ.ಶ. ೧೧೧೨ ಕಾಲದ ಶಾಸನವು "ಶ್ರೀಮನ್ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯ ದೇವರು ನೊಣಂಬವಾಡಿ ಮೂವತ್ತಿರ್ಚ್ಚಾಸಿರಮುಮಂ ಸುಖ...ರಾಜ್ಯಂಗೆಯುತ್ತಮಿರೆ" ಚಾಳುಕ್ಯ ತ್ರಿಭುವನಮಲ್ಲನ ಮಂಡಳೇಶ್ವರನಾದ ತ್ರಿಭುವನಮಲ್ಲ ಪಾಂಡ್ಯದೇವ ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು.

**ಮಹಾಸಾಮಂತ ಘಟ್ಟಿಯರಸ :**

ಕೋಗಳಿನಾಡಿನ ಕದಂಬ ಮನೆತನದಲ್ಲಿ ಪ್ರಸಿದ್ಧ 'ಮನ್ನೆಯ' ಇವನಾಗಿದ್ದಾನೆ. ಇವನ ಕಾಲದಲ್ಲಿಯೇ 'ಮಹಾಸಾಮಂತ' ಸ್ಥಾನದಿಂದ ಮಹಾಮಂಡಳೇಶ್ವರ ಸ್ಥಾನಕ್ಕೆ ಏರಿಕೆಯಾದದ್ದನ್ನು ಶಾಸನಗಳು ಹೇಳುತ್ತವೆ. ಈತನಿಗೆ ಹಾಗೂ ಆಯ್ತವರ್ಮನಿಗೂ ಇರುವ ಸಂಬಂಧ ಗೊತ್ತಾಗುವುದಿಲ್ಲ. ಇವನು ಆಯ್ತವರ್ಮನ ಪುತ್ರನಾಗಿರಬೇಕು. ಘಟ್ಟಿಯರಸನ ಪ್ರಥಮ ಉಲ್ಲೇಖ ಮೋರಿಗೆರೆ ಶಾಸನದಲ್ಲಿ ಬರುತ್ತಿದ್ದು, ಅಲ್ಲಿ "ಕದಂಬರಾಭರಣಂ ಮಹಾಸಾಮಂತಂ ಮನ್ನೆಯ ವಲ್ಲಹ ಶ್ರೀಸಾಮಸ್ತ ಗರುಡ ಪಾದಪಂಕಜ ಭ್ರಮರ ಕೋಗಳಿ ಅಯ್ನೂಱಱ ಮನ್ನೆಯಂ ಶ್ರೀಮತ್ ಘಟ್ಟಿಯರಸ" ಎಂದು ಕರೆಯಲಾಗಿದೆ.

ಕಲ್ಯಾಣ ಚಾಳುಕ್ಯ ಚಕ್ರವರ್ತಿ ಇಮ್ಮಡಿ ಸೋಮೇಶ್ವರನಿಗೂ ಹಾಗೂ ಅವನ ಸಹೋದರ ಆರನೆಯ ವಿಕ್ರಮಾದಿತ್ಯನಿಗೂ ನಡೆದ ಅಂತರಯುದ್ಧದಲ್ಲಿ ಈತನು ವಿಕ್ರಮಾದಿತ್ಯನಿಗೆ ತನ್ನ ನಿಷ್ಠೆಯನ್ನು ವ್ಯಕ್ತಪಡಿಸಿದ್ದಾನೆ. ಹೀಗಾಗಿ ಆರನೆಯ ವಿಕ್ರಮಾದಿತ್ಯನು ಈತನನ್ನು ಮಹಾಮಂಡಳೇಶ್ವರನ ಸ್ಥಾನಕ್ಕೇರಿಸುತ್ತಾನೆ. ಅಂಬಳಿ ಶಾಸನದಲ್ಲಿ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯ ದೇವನಿಗೆ ಅಧೀನನಾಗಿ ಮಹಾಮಂಡಳೇಶ್ವರ ಘಟ್ಟಿಯರಸ ಕೋಗಳಿ-೫೦೦ರನ್ನು ಕೊಟ್ಟೂರಿನಿಂದ ಆಳುತ್ತಿದ್ದನೆಂದು ಹೇಳಲಾಗುತ್ತದೆ.

ಕೊಟ್ಟೂರಿನ ಕ್ರಿ.ಶ. ೧೧೧೨ರ ಶಾಸನದಲ್ಲಿ ಈತನು ಉತ್ತರಾಯಣ ಸಂಕ್ರಾಂತಿ ನಿಮಿತ್ತ ಕೊಟ್ಟೂರಿನ ಮುಲಸ್ಥಾನದ ಶ್ರೀ ರಾಮೇಶ್ವರ ದೇವಸ್ಥಾನದಾಚಾರ್ಯರಾದ ಶ್ರೀ ಮದಮೃತರಾಶಿ ಪಂಡಿತರ ಕಾಲತೊಳೆದು ದೇವರಂಗ ಬೋಗಕ್ಕೆ ನಿವೇದ್ಯಕ್ಕೆ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ತಪೋಧನರಾಹಾರ ದಾನಕ್ಕೆ ಪಾವುಳ ವರ್ಗಕ್ಕೆ ಕೊಟೂರಿನ ದಕ್ಷಿಣಕ್ಕಿರುವ ನೇರಿಲೆಕೆರೆಯನ್ನು ಕೆರೆಯ ಕೆಳಗಣದದ್ದೆಯ ಹಾಗೂ ಗಾಣ, ತೋಟ, ಕೋಟೆಯೊಳಗೆ ೪ ಮನೆಯ ನಿವೇಶನಗಳನ್ನು ಬಿಟ್ಟುಕೊಟ್ಟಿದ್ದನು.

**ಮಹಾಂಡಳೇಶ್ವರ ನಾಚಿದೇವರಸ :**

ನಾಚಿದೇವರಸನು ತ್ರಿಭುವನಮಲ್ಲ ಪಾಂಡ್ಯದೇವ ಕೇಸಾಪುರದ ನೆಲೆವೀಡಿನಲ್ಲಿದ್ದಾಗ ಆತನ ಅಧೀನನಾಗಿ ಕೊಟ್ಟೂರು-೧೨, ಕೋಗಳಿ-೫೦೦ ಆಳುತ್ತಿದ್ದನೆಂದು ಹೇಳಲಾಗಿದೆ. ನಾಚಿದೇವರಸ ಘಟ್ಟಿದೇವರಸನ ಪುತ್ರನಾಗಿರಬೇಕು. ತನ್ನೊಬ್ಬ ಮಗನಿಗೆ ತನ್ನ ತಂದೆಯ ಹೆಸರಾದ ಘಟ್ಟಿದೇವರಸ ಎಂದೇ ಇಟ್ಟಿರುವುದು ಆಧಾರವಾಗಿದೆ.

ನಾಚಿದೇವರಸನ ಪಟ್ಟದ ರಾಣಿ ಶ್ರೀಯಾದೇವಿ ಇವರಿಗೆ (ಎರಡನೆ) ಘಟ್ಟಿದೇವರಸ ಹಾಗೂ ವಿರೂಪಾಕ್ಷದೇವ ಎಂಬ ಇಬ್ಬರು ಪುತ್ರರು. ಇವರೆಲ್ಲ ಸೇರಿ ಡಕ್ಕೇಶ್ವರ ದೇವರಿಗೆ, ಮಲ್ಲಿಕಾರ್ಜುನ ದೇವರಿಗೆ ಪೂಜೆ-ಪುನಸ್ಕಾರ, ನೈವೇದ್ಯಕ್ಕೆ ತಪೋಧನಗಳ ಆಹಾರದಾನಕ್ಕೆ ಮತ್ತು ರಾಮೇಶ್ವರ ದೇವರ ಆಚಾರ್ಯರಾದ ಕೇದಾರ ಪಂಡಿತ ದೇವರಿಗೆಂದು ಶ್ರೀಕೇದಾರ ಮಹಾಮುನಿಗಳ ಕಾಲು ತೊಳೆದು ಗದ್ದೆ ದಾನ ಬಿಡುತ್ತಾನೆ. ಇವನ ಆಳ್ವಿಕೆಗೆ ಕೋಗಳಿ-೫೦೦, ಕೊಟ್ಟೂರು-೧೨ ಒಳಪಟ್ಟಿದ್ದವು.

ಹಳ್ಯದ ಕ್ರಿ.ಶ. ೧೧೫೪ರ ಶಾಸನವು ನಾಚಿದೇವರಸ ಕೋಗಳಿ-೫೦೦, ಕೊಟ್ಟೂರು-೧೨ ಆಳುತ್ತಿದ್ದು, ಕೊಟ್ಟೂರು-೧೨ರಲ್ಲಿದ್ದ ಯೆಳಹಹಳ್ಯ, ಹ್ಯಾಳ್ಯಾ ಗ್ರಾಮದ ಅಗಸ್ತೇಶ್ವರ ದೇವರ ತ್ರಿಕಾಲ ಪೂಜೆಗೆ, ಅಂಬೋಗಕ್ಕೆ, ನೈವೇದ್ಯಕ್ಕೆ, ಚೈತ್ರ, ಪವಿತ್ರಕ್ಕೆ ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕೆ... ಅಡಕೆ, ತೋಟ ಹಾಗೂ ಭೂಮಿಯನ್ನು ದಾನ ಕೊಟ್ಟನೆಂದು ತಿಳಿದುಬರುತ್ತದೆ.

**ಇಮ್ಮಡಿ ಘಟ್ಟದೇವರಸ :**

ನಾಚಿದೇವರಸನಿಗೆ ಪಟ್ಟಮದೇವರ ಶ್ರೀಯಾದೇವಿಗೆ ಪುತ್ರ ಘಟ್ಟಿದೇವರಸ ಮತ್ತು ವಿರೂಪಾಕ್ಷರು ಜನಿಸಿದ್ದು ಇವರೆಲ್ಲಾ ಸೇರಿ ದೇವರಿಗೆ ದಾನ ಬಿಟ್ಟುದನ್ನು ಕ್ರಿ.ಶ. ೧೧೧೩ ಕೊಟ್ಟೂರು ಶಾಸನದಲ್ಲಿ ಹೇಳಲಾಗಿದೆ.

ಕ್ರಿ.ಶ. ೧೧೨೧ ಡಿಸೆಂಬರ್ ೨೫ ಶಾಸನದಲ್ಲಿ ಈ ಘಟ್ಟಿದೇವರಸನು "ಕೋಗಳಿಯಯ್ನೂಱಱ ಮನವಿಯ ಮನೇಕಾಧಿಷ್ಠಿತಂ ಸುಖದಿನಾಳುತ್ತಮಿರೆ" ಎಂದು ಉಲ್ಲೇಖಿಸುತ್ತದೆ.

**ಉಜ್ಜನಿ ದೇವಾಲಯದ ಶಾಸನಗಳು :**

ಉಜ್ಜನಿಗೆ ಒಂದು ಸಾವಿರ ವರ್ಷದ ಇತಿಹಾಸವಿದೆ. ಇಲ್ಲಿನ ಅನೇಕ ಅಂಶಗಳಾದ ಸ್ಮಾರಕಗಳು, ಜನಪದ ಹಾಡುಗಳು, ಕಥೆಗಳು, ಶರಣರ ಜೀವನ, ವೀರರ ಬಗ್ಗೆ ಇರುವ ಕುರುಹುಗಳು ಇನ್ನು ಜೀವಂತವಾಗಿವೆ.

ಊರು : ಉಜ್ಜನಿ
ಶೈಲಿ : ಕಲ್ಯಾಣಿ ಚಾಳುಕ್ಯರು
ಸ್ಥಳ : ಗ್ರಾಮದ ಈಶಾನ್ಯಕ್ಕೆ
ಅಭಿಮುಖ : ಉತ್ತರ
ಸ್ಮಾರಕ : ಮಲ್ಲಿಕಾರ್ಜುನ (ಮರುಳಸಿದ್ಧೇಶ್ವರ)
ಸ್ಥಿತಿ: ಉತ್ತಮ
ಕಾಲ : ಕ್ರಿ.ಶ. ೧೨ನೆಯ ಶತಮಾನ

ಉಜ್ಜನಿಯಲ್ಲಿರುವ ಈ ದೇವಾಲಯ ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ನಿರ್ಮಾಣವಾದರೂ ಕೂಡ ದೇವಾಲಯಕ್ಕೆ ಯಾದವರು, ವಿಜಯನಗರ ಅರಸರು, ಪಾಳೆಗಾರರು ಅನೇಕರು ದಾನ-ದತ್ತಿಗಳನ್ನು ಕೊಟ್ಟುದ್ದಲ್ಲದೇ ಕ್ರಮೇಣ ಅದನ್ನು ಜೀರ್ಣೋದ್ಧಾರ ಮಾಡುತ್ತಾ ಬಂದಿದ್ದಾರೆ. ವಿವಿಧ ಭಾಗಗಳನ್ನು ಸೇರಿಸುತ್ತಾ ವಿಸ್ತಾರಗೊಳಿಸಿದ್ದಾರೆ. ಈ ದೇವಾಲಯ ವಿಶಾಲವಾದ ಪ್ರಕಾರದೊಳಗಿರುವಂತದ್ದು. ಐದು ಗರ್ಭಗೃಹಗಳು, ಅಂತರಾಳ, ಸಭಾಮಂಟಪ, ಮಹಾಮಂಟಪ, ದ್ವಾರ ಗೋಪುರುಗಳಲ್ಲದೇ ಇತ್ತೀಚಿಗೆ ನಿರ್ಮಾಣವಾದ ಮಂಟಪಗಳು, ಅನ್ನ ಸಂತರ್ಪಣ ಮಂದಿರ ಮುಂತಾದವುಗಳಿವೆ. ಐದು ಗರ್ಭಗುಡಿಗಳಲ್ಲಿ ದಕ್ಷಿಣ ದಿಕ್ಕಿನಲ್ಲಿರುವಂತಹದ್ದು ಮುಖ್ಯವಾದುದು. ಇದರಲ್ಲಿ ಅಂತರಾಳ ಮರುಳಸಿದ್ಧೇಶ್ವರ ಲಿಂಗವಿದ್ದು, ಅದಕ್ಕೆ ಬೆಳ್ಳಿಯ ಮುಖವಾಡ ಹಾಕಿ ಪೂಜಿಸುತ್ತಾರೆ. ಗರ್ಭಗೃಹದ ಬಾಗಿಲವಾಡವು ಹೂಬಳ್ಳಿ, ಸುರುಳಿ, ಅರೆಗಂಬ ಮತ್ತು ಸಿಂಹಗಳಿಂದ ಕೂಡಿದ ನಾಲ್ಕು ಶಾಖೆಗಳಲ್ಲಿ ಅಲಂಕೃತಗೊಂಡಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬು ಕೆತ್ತನೆ ಮೊದಲಾದ ಅಲಂಕಾಗಳಿವೆ.

ಪೂರ್ವಭಾಗ ಎರಡು ಗರ್ಭಗೃಹದ ಒಂದರಲ್ಲಿ ವೀರಭದ್ರ, ಇನ್ನೊಂದರಲ್ಲಿ ಧಯಾನ ಮುದ್ರೆ ಪದ್ಮಾಸನದಲ್ಲಿರುವ ಶೈವ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯದಲ್ಲಿ ಇನ್ನೂ ಹಲವಾರು ಸಣ್ಣ ಸಣ್ಣ ಮೂರ್ತಿ ಶಿಲ್ಪಗಳಿವೆ. ಹತ್ತು ಕಂಬಗಳಿಂದ ಕೂಡಿದ ಸಭಾಮಂಟಪವು ಹದಿನೆಂಟು ಅಂಕಣಗಳನ್ನು ಹೊಂದಿದೆ. ಈ ಕಂಬಗಳನ್ನು ತಿರುಗುಣಿ ಯಂತ್ರದಿಂದ ಮಾಡಿದ್ದು, ತುಂಬ ನಯವಾಗಿದೆ. ಇದರ ಮೇಲ್ಛಾವಣಿಯಲ್ಲಿರುವ ಭುವನೇಶ್ವರಿಯನ್ನು ಶಿಲ್ಪಿಯು ಅತ್ಯಂತ

ಸೂಕ್ಷ್ಮ ಕುಸುರಿ ಕೆತ್ತನೆಗಳಿಂದ ಅಲಂಕರಿಸಿದ್ದಾನೆ. ಈ ಭುವನೇಶ್ವರಿಯ ಕೆತ್ತನೆ ಕಂಡ ಜನ ಹಂಪಿಯನ್ನು ಹೊರಗೆ ನೋಡು ಉಜ್ಜನಿಯನ್ನು ಒಳಗೆ ನೋಡು ಎಂದು ಹೇಳಿರಬೇಕು.

ಮರುಳಸಿದ್ಧೇಶ್ವರನ ದೇವಸ್ಥಾನದ ಗರ್ಭಗುಡಿಯ ಎಡ ಮತ್ತು ಬಲಭಾಗದಲ್ಲಿ ೪ ಸಣ್ಣ ಗರ್ಭಗೃಹಗಳಿವೆ. ಇವುಗಳಲ್ಲಿ ಜಕಣಾಚಾರಿ ಮತ್ತು ಶ್ರೀ ಕೃಷ್ಣನ ವಿಗ್ರಹಗಳು ಎಡಭಾಗದಲ್ಲಿವೆ. ಜಕಣಾಚಾರಿಯ ಮೂರ್ತಿ ಇಲ್ಲಿ ಮಾತ್ರ ಇದೆ ಎಂಬ ನಂಬಿಕೆ. ಅಂತೆಯೇ ಈ ದೇವಸ್ಥಾನದ ಇನ್ನೊಂದು ವಿಶೇಷವೆಂದರೆ ಶೈವ ಪೂಜಾ ಪರಂಪರೆಯ ದೇವಸ್ಥಾನದಲ್ಲಿ ಶ್ರೀ ಕೃಷ್ಣನ ವಿಗ್ರಹ ಪೂಜೆಗೊಳ್ಳುತ್ತಿರುವುದು ಧರ್ಮ ಸಮನ್ವಯಕ್ಕೆ ಹೆಸರಾಗಿದೆ ಎಂಬುವುದಕ್ಕೆ ಇದಕ್ಕಿಂತಲೂ ಸ್ಪಷ್ಟ ನಿದರ್ಶನ ಇನ್ನೊಂದಿರಲಿಕ್ಕಿಲ್ಲ ಅಥವಾ ಶೈವ, ವೈಷ್ಣವ ಮತದ ಸಮನ್ವಯದ ಕ್ಷೇತ್ರವಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಹಿಂದೂ ಧರ್ಮದ ಮುಖ್ಯ ಶಾಖೆಗಳಾದ ಶೈವ, ವೈಷ್ಣವ ಪರಂಪರೆ ಒಂದೇ ನೆಲೆಗಟ್ಟಿನಲ್ಲಿ ನಿಲ್ಲಬಲ್ಲದು. ಆದರೂ ಶಿವನಿಗೆ ಇಲ್ಲಿ ಆದ್ಯ ಸ್ಥಾನ. ಬಲಭಾಗದ ಗರ್ಭಗುಡಿಗಳಲ್ಲಿ ಶಿವ ಮತ್ತು ವೀರಭದ್ರನ ಮೂರ್ತಿಗಳಿವೆ.

ಇದೇ ದೇವಸ್ಥಾನದ ಸಭಾ ಮಂಟಪದಲ್ಲಿ ಗಣೇಶ, ನಂದಿ ವಿಗ್ರಹ, ಉತ್ಸನ ಮೂರ್ತಿ, ವಿಶ್ವರಾಧ್ಯ, ಮರುಳಾರಾಧ್ಯ, ಸಿದ್ಧರಾಮ, ಭಕ್ತವಿಭೂಷಣ, ಪಾಪ ವಿಮೋಚನ, ಮಳೆ ಮಲ್ಲಿಕಾರ್ಜುನ, ವೀರಭದ್ರನ ವಿಗ್ರಹಗಳು ಪೂಜೆಗೊಳ್ಳುತ್ತವೆ. ವಿಶಾಲವಾದ ಪ್ರಾಂಗಣದಲ್ಲಿ ವಿಶೇಷ ಧಾರ್ಮಿಕ ವಿಧಿ-ವಿಧಾನಗಳು ನೆರವೇರುತ್ತವೆ.

ದೇವಾಲಯದಲ್ಲಿ ಒಟ್ಟು ೯ ಶಾಸನಗಳಿವೆ. ೧. ಕ್ರಿ.ಶ. ೧೨ನೆಯ ಶತಮಾನದ ಜಗದಳ ಪಾಂಡ್ಯನ ಶಾಸನವೇ ಮೊದಲನೆಯದು. ಕೋಗಳಿಯಲ್ಲಿ ೪೦೦ ಕಮ್ಮ ಭೂಮಿಯನ್ನು ಉಜ್ಜಿನಿಯ ಕಲಿದೇವನಿಗೆ ದಾನ ನೀಡಿದ ಉಲ್ಲೇಖ ಇದರಲ್ಲಿದೆ. ೨. ವಿಜಯನಗರದ ಅರಸು ಅಚ್ಚುತದೇವ ಆನಂದ ನಿಧಿಯನ್ನು ನೀಡದ ಉಲ್ಲೇಖ ಇನ್ನೊಂದು ಶಾಸನದಲ್ಲಿದೆ (ಕ್ರಿ.ಶ. ೧೫೩೯). ೩. ಯಾದವ ಅರಸು ಮಹಾದೇವನ ಕಾಲದ ಶಾಸನವು ನವರಂಗದ ಕಂಬದ ಮೇಲಿದೆ. ಇದರಲ್ಲಿ ಮಲ್ಲಿನಾಥ ದೇವರ ನಂದಾ ದೀವಿಗೆಗೆ ದತ್ತಿ ಕೊಟ್ಟ ಮಾಹಿತಿಯಿದೆ. ೪. ಅಲ್ಲದೆ ಕ್ರಿ.ಶ. ೧೨೬೮ರ ಶಾಸನವು ಬೋಗಯ್ಯ ಎಂಬುವನು ಮಲ್ಲಿಕಾರ್ಜುನ ದೇವರಿಗೆ ಸುಂಕಮಾನ್ಯ ಮಾಡಿದ್ದನ್ನು ಸೂಚಿಸುತ್ತದೆ. ೫. ದೇವಾಲಯದಲ್ಲಿನ ಶಾಲಿವಾಹನ ಶಕ ವರುಷ ೧೬೩೪ರ ಗಂಟೆಯ ಶಾಸನವು ಸಿದ್ಧೇಶ್ವರಸ್ವಾಮಿಗೆ ಮುಮ್ಮಡಿ ಬಸವಪ್ಪ ನಾಯಕನು ಘಂಟೆ ಮಾಡಿಸಿದ ಬಗ್ಗೆ ಹೇಳುತ್ತದೆ. ಈ ಎಲ್ಲ ಶಾಸನಗಳನ್ನು ಗಮನಿಸಿದರೆ ಕ್ರಿ.ಶ. ೧೨ನೆಯ ಶತಮಾನದಲ್ಲಿ ಕಲಿದೇವರೆಂದು ಕರೆಸಿಕೊಂಡ ಈ ದೇವರು ಮಲ್ಲಿಕಾರ್ಜುನನೆಂದೂ, ಸಿದ್ಧೇಶ್ವರನೆಂದೂ ಪರಿವರ್ತನೆಯಾಗಿರುವುದು

ಸ್ಪಷ್ಟವಾಗುತ್ತದೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾದ ಈ ದೇವಸ್ಥಾನ ಹತ್ತು ಕಂಬಗಳಿಂದ ಕೂಡಿದ ೧೮ ಅಂಕಣಗಳ ಸಭಾ ಮಂಟಪವಿದೆ. ಕಂಬಗಳು ನಯವಾಗಿ ವೃತ್ತಾಕಾರವಾಗಿದೆ. ಚಾಲುಕ್ಯರ ಕಾಲದಿಂದ ಆರಂಭವಾಗಿ ಯಾದವ, ವಿಜಯನಗರ ಪಾಳೆಗಾರರ ಕಾಲಗಳಲ್ಲಿ (ದಾನದತ್ತಿ) ಪಡೆದುಕೊಂಡು ಅಭಿವೃದ್ಧಿ ಹೊಂದುತ್ತಾ ಬಂದಿದೆ. ಕರ್ನಾಟಕ ಶಿಲ್ಪಕಲೆಯಲ್ಲಿ ವೈಭವವನ್ನು ಸಾರಬಹುದಾದ ಈ ದೇವಾಲಯ ತೈಲಾಭಿಷೇಕ ಮತ್ತು ಬಣ್ಣಗಳಿಂದಾಗಿ ತನ್ನತನವನ್ನು ಮರೆಮಾಚಿಕೊಂಡಿದೆ.

**ಗೌರಮ್ಮ ದೇವಸ್ಥಾನ :**

ಮರುಳಸಿದ್ಧೇಶ್ವರನ ದೇವಸ್ಥಾನದ ಎಡಭಾಗದಲ್ಲಿ ಗೌರಿದೇವಿಯ ದೇವಸ್ಥಾನವಿದೆ. ಗೌರಮ್ಮ ದೇವಿಯು ಮರುಳಸಿದ್ಧೇಶ್ವರನ ಪತ್ನಿ ಎಂದೇ ಪೂಜೆಗೊಳ್ಳುತ್ತಾಳೆ. ಈ ದೇವಾಲಯವು ೩ ಅಂಕಣಗಳನ್ನು ಹೊಂದಿದೆ. ಮುಖಮಂಟಪ, ಸುಕನಾಸಿ ಮತ್ತು ಗರ್ಭಗೃಹದಲ್ಲಿರುವ, ನಿಂತ ಭಂಗಿಯಲ್ಲಿರುವ ಸ್ತ್ರೀ ವಿಗ್ರಹ ಸುಂದರ ಶಿಲ್ಪವಾಗಿದೆ. ಕಪ್ಪು ಶಿಲೆಯಲ್ಲಿ ಕೆತ್ತನೆಗೊಂಡಿರುವ ಈ ವಿಗ್ರಹ ಸುಂದರವಾಗಿದೆ. ಗರ್ಭಗುಡಿಯ ಮೇಲಿನ ದ್ರಾವಿಡ ಶೈಲಿಯ ಗೋಪುರ ಅಲ್ಪ ಪ್ರಮಾಣದ ಆಧುನಿಕ ಲೇಪವನ್ನು ಪಡೆದುಕೊಂಡಿದೆ. ಪ್ರತಿವರ್ಷ ಅಕ್ಷತ್ತದಗಿ ಅಮವಾಸೆಯ ಹಿನೆಯ ದಿನದಂದು ಇವರಿಬ್ಬರ ಮದುವೆ ನಡೆಯುತ್ತದೆ. ರಥೋತ್ಸವ ಎಂದೇ ಹೆಸರಾಗಿ ಪ್ರತಿವರ್ಷ ಆಚರಣೆಗೊಳ್ಳುತ್ತದೆ.

**ಅಂಕಳೆ ಬಸವಣ್ಣ :**

ಬಸವಣ್ಣನ ಹೆಸರು ಈ ಪರಿಸರದಲ್ಲಿ ನಂದಿ, ಎತ್ತು, ಹೋರಿ, ಗೂಳಿಗೆ ಬಳಕೆಯಾಗುತ್ತದೆ. ಮರುಳಸಿದ್ಧೇಶ್ವರ ದೇವಸ್ಥಾನದ ಬಲಭಾಗದಲ್ಲಿರುವ ಈ ಬಸವನ ಗುಡಿಯು ಒಂದು ಅಂಕಳ (ಅಂಕಣ) ತುಂಬಾ ಇರುವುದರಿಂದ ಅಂಕಳೆ ಬಸವಣ್ಣ ಎಂದು ಕರೆಯುತ್ತಾರೆ. ಇದು ಬೆಳೆಯುತ್ತಿರುವ ನಂದಿ ಎಂಬ ನಂಬಿಕೆಯಿದೆ. ಈ ಮೊದಲು ಬೆಳೆಯುತ್ತಲೆ ಇತ್ತು. ಭುಜದ ಬಳಿ ಹಾರೆ ಹಾಕಿದ್ದರಿಂದ ಬೆಳೆಯುವುದು ನಿಂತಿದೆ ಎಂಬ ಐತಿಹ್ಯ ಇಂದಿಗೂ (ಕುರಗೋಡಿನ ಬಸವಣ್ಣನಿಗೂ ಇದೇ ಮಾತಿದೆ) ಬಳಕೆಯಲ್ಲಿದೆ.

ಏಕ ಶಿಲ್ಪಕಲೆಗೆ ಉಜ್ಜಿನಿಯಲ್ಲಿ ಹೆಸರಾಗಿರುವ ಈ ನಂದಿ ವಿಗ್ರಹ ಎಂತಹ ಹಮ್ಮಿನ ವ್ಯಕ್ತಿಯ ಗರ್ವವನ್ನು ನೋಡಿದ ಒಂದು ಕ್ಷಣಕ್ಕೆ ಇಳಿಸಿಬಿಡುತ್ತದೆ. ನೋಡಿದಾಕ್ಷಣ ಅಬ್ಬಾ! ಎನ್ನಿಸುವ ನಂದಿ ನಿಜಕ್ಕೂ ಭವ್ಯ ವಿಗ್ರಹವಾಗಿದೆ. ಹೊಂಕರಿಸುತ್ತಲೇ ಪಶ್ಚಿಮಕ್ಕೆ ಮುಖ ಮಾಡಿ ಮಲಗಿರುವ ಈ ನಂದಿ ಪ್ರತ್ಯೇಕವಾಗಿ ಪ್ರಚುರಪಡಿಸುತ್ತದೆ.

ಮರುಳಸಿದ್ಧೇಶ್ವರ ಸ್ವಾಮಿಯ ದೇವಸ್ಥಾನಕ್ಕೆ ಸಂಬಂಧಿಸಿದಂತೆ ೪ ನಂದಿ ವಿಗ್ರಹಗಳಿವೆ. ಮೊದಲನೆಯದು ಮರುಳಸಿದ್ಧೇಶ್ವರ ಸ್ವಾಮಿಯ ಎದುರಿನ ನವರಂಗದಲ್ಲಿನ ನಂದಿ. ಎರಡನೆಯದು ಸ್ವಾಮಿಯ ಎದುರಿನ ಮಂಟಪದಲ್ಲಿ (ಪಾದಗಟ್ಟೆ) ಬಂಗಾರದ ಬಸವಣ್ಣ. ಮೂರನೆಯದು ಈ ಅಂಕಳಿ ಬಸವಣ್ಣ, ನಾಲ್ಕನೆಯದು ಹಾಗೂ ಕೊನೆಯದು ಗರ್ಭಗುಡಿಯ ಮೇಲಿನ ಶಿಖರದ ಮುಂದೆ ನಿಂತಿರುವ ಲಾಂಛನ ನಂದಿ, ಶೈವ ಪರಂಪರೆಯಲ್ಲಿ ನಂದಿಗೆ ತುಂಬ ಮಹತ್ವವಿದೆ. ಪ್ರತಿ ಶಿವಲಿಂಗದ ಮೂರ್ತಿ ಎದುರಿನಲ್ಲಿ ಶಿವನ ವಾಹನ ನಂದಿ ಇದ್ದೇ ಇರುತ್ತದೆ.

**ಅರಕೆ-ಹರಕೆ ಗುಡಿ :**

ದೇವಸ್ಥಾನದ ಆವರಣದಲ್ಲಿ ಶ್ರೀ ಮರುಳಸಿದ್ಧೇಶ್ವರ ಸ್ವಾಮಿಯ ದೇವಸ್ಥಾನಕ್ಕೆ ಸಂಪರ್ಕವಿದ್ದರೂ, ಅನಂತರ ಕಟ್ಟಲ್ಪಟ್ಟಿರುವ ಈ ಗುಡಿಯು ಜನತೆಯ ಗರ್ವ, ಶ್ರೀಮಂತಿಕೆ, ಅಹಂಗಳನ್ನು ಅರಕೆ ಮಾಡುತ್ತದೆ. 'ಅರಕೆ' ಅಂದರೆ 'ಕೊರತೆ ಮಾಡು', ಕಡಿಮೆಗೊಳಿಸು, ನಿರಂತರವಾಗಿ ಏರದಿರುವುದು ಎಂದರ್ಥ. ಉಜ್ಜಿನಿಯಲ್ಲಿ ಯಾವುದೇ ಒಬ್ಬ ವ್ಯಕ್ತಿ ಅಹಂ ಬೆಳೆಸಿಕೊಂಡಾಗಲಿ, ಶ್ರೀಮಂತನಾಗಲಿ ಮೆರೆದನೆಂದರೆ ಅವನ ಗರ್ವ, ಅಹಂ, ಸಿರಿವಂತಿಕೆ, ಆಯಸ್ಸು ಕೆಲವೇ ಕೆಲವು ವರ್ಷಗಳು ಮಾತ್ರ, ಈ ಅರಕೆ ಗುಡಿಯಿರುವುದರಿಂದ ಯಾವೊಬ್ಬನೂ ಸೊಕ್ಕಿನಿಂದ ಮೆರೆಯಲಾಗದು ಎಂಬುದು ಜನಪದರ ಅಭಿಪ್ರಾಯ. ಅಷ್ಟೇನೂ ಆಕರ್ಷಣೆ ಇಲ್ಲದ ಈ ಗುಡಿ ಚಿಕ್ಕದಾಗಿಯೂ ಅಥವಾ ಪ್ರಬಲ ಬೇಡಿಕೆಯನ್ನು ದೇವರಿಗೆ ಸಲ್ಲಿಸುವುದಿದ್ದರೆ ಈ ಗುಡಿಯಲ್ಲಿ ಹರಕೆ ಮಾಡಿಕೊಳ್ಳುವ ಪ್ರತೀತಿಯಿತ್ತು ಎನ್ನಲಾಗುತ್ತಿದೆ.

ಅರಕೆ ಮತ್ತು ಹರಕೆ ಎರಡೂ ಪಾತ್ರಗಳ ಗುಡಿಯಾಗಿತ್ತೇ? ಅಥವಾ ಹರಕೆ ಗುಡಿಯೇ ಆಡು ಭಾಷೆಯಲ್ಲಿ ಅರಕೆ ಗುಡಿಯಾಗಿರಬಹುದೆ? ಅಥವಾ ಈ ಎಲ್ಲ ಅಂಶಗಳೊಂದಿಗೆ ಭಕ್ತರು ದೇವರಲ್ಲಿ ಹೊತ್ತ ಹರಕೆಯನ್ನು ತೀರಿಸಲು ಈ ಗುಡಿಯನ್ನು ಬಳಸುತ್ತಿದ್ದರೆ ಎಂಬ ಪ್ರಶ್ನೆಗಳು ಎದುರಾಗುತ್ತವೆ. ಸಿದ್ಧೇಶ್ವರ ಸ್ವಾಮಿಯ ಬಳಿ ಹೊತ್ತ ಹರಕೆಯನ್ನು ಗರ್ಭಗುಡಿಯಲ್ಲಿ ತೀರಿಸುವುದು ಕಠಿಣ. ಜವಳ, ಮಡಿ ಮೊದಲಾದ ಹರಕೆ ತೀರಿಸಲು ಗರ್ಭಗುಡಿಯ ನವರಂಗ, ಸುಕನಾಸಿ ಸಲ್ಲದು. ಕಾರಣವಾಗಿ ಈ ಹರಕೆ ಗುಡಿ ಹುಟ್ಟಿಕೊಂಡಿರಬಹುದು ಎಂಬ ಪ್ರಶ್ನೆಗೂ ವಕ್ತ್ಯಗಳು ಇರಬಹುದು. 'ಅಂತಹ ಹರಕೆಗಳೂ ಸೇರಿ ಇದು ಎಲ್ಲ ಹರಕೆಗಳ ಗುಡಿಯಾಗಿದೆ' ಎನ್ನುತ್ತಾರೆ. ಒಟ್ಟಿನಲ್ಲಿ ಈ ಗುಡಿ ಜನಪದರಲ್ಲಿ ಮಾತ್ರ ತುಂಬಾ ಪ್ರಭಾವ ಬೀರಿದೆ.. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವಂತೆ ಚಿಕ್ಕ ಗುಡಿಯೇ ಹೆಚ್ಚು ಹೆಸರು ಮಾಡಿದೆ. ಯಾರಾದರೂ ಹೆಚ್ಚು ಅಹಂನಿಂದ ಮೆರೆದರೆ, ಸೊಕ್ಕಿನಿಂದ ನಡೆದುಕೊಂಡರೆ 'ತಮ್ಮಾ ಇಲ್ಲಿ ಅರಕೆ ಗುಡಿ ಇದೆ, ಬಾಲ ದಿನ ನಿನ್ನಾಟ ನಡೆಯೊಲ್ಲ ಅರಕೆ ಹನ್ನೆರಡು ವರ್ಷ' ಎನ್ನುತ್ತಾರೆ.

**ಬಂಗಾರದ ಬಸವಣ್ಣನ ಗುಡಿ :**

ಶಿವನ ಮುಂದೆ ನಂದಿ ಎನ್ನುವ ಸಾಂಪ್ರದಾಯಿಕತೆ ಇಲ್ಲೂ ತಪ್ಪಿಲ್ಲ. ಸಿದ್ಧೇಶ್ವರ ಸ್ವಾಮಿಯ ಎದುರಿನ ಮಂಟಪದಲ್ಲಿ ನಂದಿ ವಿಗ್ರಹವಿದೆ. ಚೌಕಾಕಾರದ ಮಂಟಪದಲ್ಲಿ ೪ ಅಡಿ ಎತ್ತರದ ಅಧಿಷ್ಠಾನದ ಮೇಲೆ ನಂದಿ ಮಲಗಿರುವ ರೂಪದಲ್ಲಿದೆ. ಮಂಟಪದ ಎಡ ಬಲಪಾರ್ಶ್ವ ಹಾಗು ಹಿಂಬದಿಯ ಗೋಡೆಯು ಮುಚ್ಚಲ್ಪಟ್ಟಿದೆ. ಆದರೆ ಜಾಲಾಂಧ್ರದ ರೂಪದಲ್ಲಿ ಕಿರಿದಾದ ಕಿಂಡಿಗಳಿವೆ. ಮಂಟಪವು ಸುಂದರವಾದ ನಾಲ್ಕು ಕಂಬಗಳಿಂದ ನಿರ್ಮಿತವಾಗಿದೆ. ಒಂದೊಂದು ಕಂಬಕ್ಕೂ ನಾಲ್ಕು ಚಿಕ್ಕ ಕಂಬಗಳಿವೆ. ಆ ಚಿಕ್ಕ ಕಂಬವನ್ನು ಒಂದೊಂದು ಸಿಂಹವು ಹೊತ್ತು ನಿಂತಿವೆ. ದ್ರಾವಿಡ ಮಾದರಿಯ ಗೋಪುರವನ್ನು ಮೊಗ್ಗುಗಳಿರುವ ಅಲಂಕರಣ ಪಟ್ಟಿಕೆಗಳ ಸುಂದರ ಬೋಧಿಗೆಗಳು ಹೊತ್ತಿವೆ. ಈ ಮಂಟಪವು ಸಿದ್ಧೇಶ್ವರ ಮೂರ್ತಿಯು ಉತ್ತರದ ದ್ವಾರದ ಮೂಲಕ ಹೊರಗಡೆಗೆ ಕಾಣದಂತೆ ತಡೆಯುತ್ತದೆ.

**ನವಗ್ರಹ ಪಟ್ಟಿಕೆ ಮತ್ತು ದೀಪಸ್ತಂಭಗಳು :**

ಪೀಠದ ಆವರಣದಲ್ಲಿ ೨ ರೀತಿಯ ನವಗ್ರಹ ಪಟ್ಟಿಕೆಗಳಿವೆ. ಬಂಗಾರದ ಬಸವಣ್ಣನ ದೇವಾಲಯದ ಮುಂಭಾಗದ ಕಟ್ಟೆಯ ಮೇಲೆ ಸ್ಥಾಪಿತವಾಗಿರುವ ನವಗ್ರಹ ಪಟ್ಟಿಕೆ ಹೊಂದಿದೆ. ಇನ್ನೊಂದು ಅಂಕಳೆ ಬಸವಣ್ಣನ ಗುಡಿಯ ಬಲದಲ್ಲಿ ಒಂದು ಅರ್ಧ ಕಂಬವಿದೆ. ಅದರ ಮೇಲೆ ನವಗ್ರಹದ ಪಟ್ಟಿಕೆ ತಿರುಗುವ ಗುಣ ಹೊಂದಿದೆ. ಮೊದಲ ಪಟ್ಟಿಕೆಯ ಅಂಚಿನಲ್ಲಿ ಯತಿವರ್ಯರು ಹಾಗೂ ಮೇಲ್ಭಾಗದಲ್ಲಿ ಪಾದಗಳ ಉಬ್ಬು ಶಿಲ್ಪವಿದೆ.

ದೇವಾಲಯದ ಆವರಣದಲ್ಲಿ ೩ ಸ್ತಂಭಗಳಿವೆ. ದೇವಾಲಯದ ಗರ್ಭಗುಡಿಯ ಉತ್ತರ ದಿಕ್ಕಿಗೆ ಬಂಗಾರದ ಬಸವಣ್ಣನ ಗುಡಿಯ ಎಡ ಮತ್ತು ಬಲ ಎರಡು ದೀಪಸ್ತಂಭಗಳು, ದಕ್ಷಿಣ ದಿಕ್ಕಿಗೆ (ಕಪ್ಪು ಶಿಖರದ ಎದುರಿಗೆ) ಒಂದು ಸ್ತಂಭ ಇದೆ. ಧರ್ಮ ವಿಜಯದ ಸಂಕೇತವೂ ರಾತ್ರಿ ಹೊತ್ತಿನಲ್ಲಿ ಆಚರಿಸಬೇಕಾದ ಉತ್ಸವಗಳಿಗೆ ಬೆಳಕಿಗಾಗಿ ನಿರ್ಮಿಸಿಕೊಂಡ ಜ್ಯೋತಿಗಳೂ ಆಗಿರುವ ಈ ಕಂಬಗಳು ಮುಖ್ಯವಾಗಿ ನ್ಯಾಯ ಸ್ತಂಭಗಳು. ಪ್ರಾಚೀನ ಕಾಲದ ಇತಿಹಾಸದುದ್ದಕ್ಕೂ ನ್ಯಾಯದ ರಕ್ಷಣೆಗಾಗಿ ಯೂಪ ಸ್ತಂಭಗಳ ಬಳಕೆ ಕಂಡುಬರುತ್ತದೆ. ನ್ಯಾಯಾಲಯದ ಬಳಕೆಯನ್ನು ಹೊಂದಿದ್ದ ಶ್ರೀ ಪೀಠದಲ್ಲಿ ಸತ್ವ ಪರೀಕ್ಷೆಗೆ ಈ ಸ್ತಂಭಗಳನ್ನು ಬಳಸಿರಬಹುದಾದ ಸಾಧ್ಯತೆಗಳಿವೆ.

ಉತ್ತಮ ತಳಪಾಯದ ಮೇಲೆ ನಿಂತಿರುವ ಈ ಕಂಬಗಳು ಶಾಶ್ವತದ ಸಂಕೇತ. ಸುತ್ತ ಕಟ್ಟೆಯನ್ನು ಕಟ್ಟಿಸಿಕೊಂಡಿರುವ ಈ ಸ್ತಂಭಗಳು ಕೆಳಗಿನಿಂದ ಮತ್ತು ಅಡಿಭಾಗದಲ್ಲಿ ಚೌಕಾಕಾರವಾಗಿದ್ದು, ಮೇಲೆ ಹೋದಂತೆಲ್ಲ ಅಷ್ಟ ಭುಜಾಕೃತಿಯ ರೂಪವನ್ನು ತಾಳುತ್ತದೆ. ಒಂದು ಪಾರ್ಶ್ವದಲ್ಲಿ ಮಾತ್ರ

ಮೇಲೆ ಹತ್ತಲಿಕ್ಕೆ ಹೆಜ್ಜೆ ಮೆಟ್ಟಿಲುಗಳನ್ನು ನಿರ್ಮಿಸಿಕೊಂಡಿವೆ. ಪೂರ್ಣ ಮೇಲೆ ವೃತ್ತಾಕಾರದ ಸುಂದರ ಭೋದಿಯ ಮತ್ತು ದೀಪದ ಎಣ್ಣೆ ಸಿಂಬೆಯನ್ನು ಇಡಲಿಕ್ಕೆ ತ್ರಿಶೂಲಾಕಾರದ ಕಬ್ಬಿಣವಿದೆ. ದೀಪದ ಸ್ತಂಭವಾಗಿ ಕೆಲಸ ಮಾಡುವ ಈ ಸ್ತಂಭ ಮಿಂಚು ಬಂಧಕವಾಗಿಯೂ ಕೆಲಸ ನಿರ್ವಹಿಸುತ್ತದೆ. ಸುಂದರ ಶಿಲ್ಪದ ಶಿಖರಗಳು ಗುಡುಗು ಮಿಂಚಿನ ಆರ್ಭಟಕ್ಕೆ ಹಾಳಾಬಹುದೆಂದು ಅಂತಹ ಗುಡುಗು ಮಿಂಚು ತಡೆಯಲು ಈ ಮಿಂಚು ಬಂಧಕ ಸಹಾಯವಾಗುತ್ತದೆ. ಕಲ್ಲಿನ ದೀಪಸ್ತಂಭಗಳಲ್ಲದೆ ಕಬ್ಬಿಣದ ೨ ದೀಪಸ್ತಂಭಗಳಿದ್ದವು ಅವುಗಳಲ್ಲಿ ಈಗ ಒಂದು ಮಾತ್ರ ಇದೆ.

**ಪ್ರದರ್ಶನ ಪಥದ ಶಿಲ್ಪಗಳು :**

ದೇವಾಲಯದ ಆವರಣದಲ್ಲಿ ಭಕ್ತರು ಗರ್ಭಗುಡಿಯನ್ನು ಪ್ರದರ್ಶಿಸುವಂತೆ ಸೂಚಿಸುವ ಭಕ್ತ ಶಿಲ್ಪಗಳಿವೆ. ಇವು ಕೈಮುಗಿದು ಮೇಲಕ್ಕೆತ್ತಿಕೊಂಡು ಸುತ್ತುವ ಭಂಗಿಯಲ್ಲಿವೆ. ಉರುಳು ಸೇವೆಯ ರೂಪದಲ್ಲಿ ದೇವಾಲಯವನ್ನು ಪ್ರದರ್ಶಿಸುವ ಪಥವನ್ನು ಸೂಚಿಸುತ್ತವೆ. ಪ್ರಾಚೀನ ದೇಗುಲಗಳ ರಚನೆಯಲ್ಲಿ ಗರ್ಭಗುಡಿಯನ್ನಷ್ಟೇ ಪ್ರದರ್ಶಿಸುವ ಪಥವಿರುತ್ತಿತ್ತು. ಆದರೆ ಈ ದೇವಾಲಯದಲ್ಲಿ ಅಂತಹ ಪ್ರದರ್ಶನ ಪಥ ಒಳಭಾಗದಲ್ಲಿ ಇಲ್ಲವಾದ್ದರಿಂದ ಇಡೀ ದೇವಾಲಯವನ್ನೇ ಪ್ರದರ್ಶಿಸುವ ಸೂಚನೆ ಹಾಸು ಬಂಡೆಗಳ ಮೇಲಿರುವ ಉಬ್ಬು ಶಿಲ್ಪಗಳು ಸೂಚಿಸುತ್ತವೆ. ಅಲ್ಲದೆ ದೇವಾಲಯದ ಆವರಣದ ರಕ್ಷಚಣಾ ಗೋಡೆಯ ಮೇಲು ಇಂತಹ ಉಬ್ಬು ಶಿಲ್ಪಗಳಿವೆ.

ಮರುಳಸಿದ್ಧೇಶ್ವರ ದೇವರ ಗರ್ಭಗೃಹದ ಮೇಲಿರುವ ಶಿಖರಕ್ಕೆ ಪ್ರತಿವರ್ಷ ಎಣ್ಣೆಯಿಂದ ಮಜ್ಜನ ಮಾಡುವುದರಿಂದ ಅದು ಸಂಪೂರ್ಣ ಎಣ್ಣೆಯಿಂದ ಆವೃತವಾಗಿದೆ. ಈ ದೇವಾಲಯ ಮಲ್ಲಿನಾಥನಿಂದ ಮಲ್ಲಿಕಾರ್ಜುನ, ಸಿದ್ಧೇಶ್ವರ, ಮರುಳಸಿದ್ಧೇಶ್ವರ ಎಂದಾಯಿತು ಎನ್ನುವುದನ್ನು ಶಾಸನಗಳಲ್ಲಿ ನೋಡಬಹುದಾಗಿದೆ.

**೨.೨. ದೇವಾಲಯದ ಶಾಸನಗಳು :**

**೧. ದೇವಾಲಯದ ಗರ್ಭಗೃಹದ ಮುಂಭಾಗದ ಸಭಾಂಗಣದಲ್ಲಿರುವ ಶಾಸನ :**

ಉಜ್ಜಿನಿ ಗ್ರಾಮದ ಸಿದ್ಧಲಿಂಗೇಶ್ವ ದೇವಾಲಯದ ಗರ್ಭಗೃಹದ ಮುಂಭಾಗದ ಸಭಾಂಗಣದಲ್ಲಿರುವ ಶಾಸನವು ಯಾದವ ಮಹಾದೇವರಾಯನ ಕಾಲದ ಒಂಬತ್ತನೆ ವರ್ಷ ವಿಭವ ಸಂವತ್ಸರದ ಕಾರ್ತಿಕ ಬಹುಳ. ಅಮವಾಸ್ಯೆ ಸೋಮವಾರ ಸೂರ್ಯ ಗ್ರಹಣ ಅಂದರೇ, ಕ್ರಿ.ಶ. ೧೨೬೮ನೆಯ ನವೆಂಬರ್ ೬ಕ್ಕೆ ಸೇರಿದೆ. ಮಹಾದೇವರಾಯನು ಆಳುತ್ತಿರುವಾಗ ಮಹಾದಾನಿ ತಿಪ್ಪರಸನ ಅಳಿಯ ಚವುಡರಸ ಪಾಂಡ್ಯನಾಡಿನ ಸರ್ವಾಧಿಕಾರಿಯಾಗಿದ್ದನೆಂದು ಮತ್ತು ಅವರ ಪಡಿಕೆಣಿ ಚೆಗಡರ ಸುಂಕದ ವಸುಲಿಗಾರ ಚವುಡರಸನ ಕಾಲದಲ್ಲಿ ಉಜ್ಜಿನಿಯ ಶಾನಭೋಗ ಗೋವಿಂದರಸನ ಮಗ

ಸುಂಕದ ಬೋಗಯ್ಯ ಅಳಿಯ ಚವುಡರಸ ನಿರೂಪದಿಂದ ಪುರದ ಗೌಡರು, ಕಗರ ಕೋಪಯ್ಯರು ಯಾವುದೇ ವ್ಯವಹಾರದಿಂದ ಬರುವ ಸುಂಕವನ್ನು ಉಜ್ಜಿನಿಯ ಶ್ರೀ ಮಲ್ಲಿಕಾರ್ಜುನ ದೇವರ ಕಾರ್ಯಕ್ಕೆ ದಾನ ಬಿಟ್ಟರೆಂದು ತಿಳಿಸುತ್ತದೆ. ಇದರಿಂದ ಮರುಳಸಿದ್ಧೇಶ್ವರನನ್ನು ಮೊದಲು ಮಲ್ಲಿನಾಥ, ಮಲ್ಲಿಕಾರ್ಜುನ ಎಂದು ಕರೆದಿರುವುದು ತಿಳಿದುಬರುತ್ತದೆ.

**೨. ಸಿದ್ಧೇಶ್ವರ ದೇವಾಲಯದ ಪೌಳಿಯಲ್ಲಿರುವ ಶಾಸನ :**

ಉಚ್ಚಂಗಿದುರ್ಗದ (ಪಾಂಡ್ಯರ) ಕದಂಬರ ಕಾಲದ ಶಾಸನವಾಗಿದ್ದು, ಇದರ ವಿವರಣೆಯು ಪೂರ್ತಿ ಶಾಸನ ಸಿಗದ ಕಾರಣ ಇದು ಕಾಲದ ದೃಷ್ಟಿಯಿಂದ ೧೨ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದ್ದು ಎಂದು ಕದಂಬರ ಜಗದ್ದಳ ಪಾಂಡ್ಯನನ್ನು ಹೊಗಳುವ ಪ್ರಶಸ್ತಿ ಶಾಸನದ ಭಾಗ ಮಾತ್ರ ದೊರಕಿದೆ. ಇದು ಶೈವ ಶಾಸನವಾಗಿದ್ದು ಕೋಗಳಿ ೫೦೦ರನ್ನು ದಾಖಲಿಸುತ್ತದೆ. ಇಲ್ಲಿಯ ಕಲಿಯ ದೇವರಿಗೆ ಜಗದಳ ಪಾಂಡಿದೇವನಿಗೆ ಒಳಿತನ್ನು ಉಂಟು ಮಾಡಲಿ ಎಂಬ ಆಶಯವನ್ನು ಹೇಳುತ್ತದೆ.

**೩. ಸಿದ್ಧೇಶ್ವರ ದೇವಾಲಯದ ಬಲಕಂಬದ ಮೇಲಿರುವ ಶಾಸನ :**

ಸಿದ್ಧೇಶ್ವರ ದೇವಾಲಯದ ಬಲಕಂಬದ ಮೇಲಿರುವ ಶಾಸನವು ಯಾದವ ದೊರೆ (೧೨೫೧ ಪಟ್ಟಕ್ಕೆ) ಮಹಾದೇವನ ಆಡಳಿತಾವಧಿಗೆ ಸೇರಿದ್ದಾಗಿದೆ. ಯಾದವ ಮಹಾದೇವನು ಪಟ್ಟಾಭಿಶಕ್ತನಾದ ಹತ್ತನೆಯ ವರ್ಷದ ಜೇಷ್ಠ ಬಹುಳ ಹತ್ತು ಸೋಮವಾರದಲ್ಲಿ ಅಂದರೆ ಕ್ರಿ.ಶ. ೧೨೬೧-೭೧ರ ಅವಧಿಯಲ್ಲಿ ಈ ಶಾಸನವಿದ್ದು, ಹೆಚ್ಚು ತ್ರುಟಿತವಾದ ಈ ಶಾಸನವು ಹೆಚ್ಚಿನ ಮಾಹಿತಿಯನ್ನು ಕೊಡುವುದಿಲ್ಲ. ದೊರೆ ಮಹಾದೇವನ ಸರ್ವಾಧಿಕಾರಿಯಾದ ತಿಪ್ಪರಸನ ಅಳಿಯ ಚೌಡರಸನ ನೀರೂಪದಿಂದ ಬೊಮ್ಮರಸನು ಪಾಂಡ್ಯ ನಾಡಿನಲ್ಲಿರುವ (ಉಜ್ಜಿನಿ)ಯ ಮಲ್ಲಿನಾಥ ದೇವರ ನಂದಾದೀವಿಗೆಗೆ ಕೆಲವೊಂದು ತೆರಿಗೆಗಳನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಮಹಾದೇವನು ೧೨೫೧ರಲ್ಲಿ ಯುವರಾಜನಾಗಿ ಆಡಳಿ ಆರಂಭಿಸಿದನು. ಅವನ ಸಹೋದರ ಕನ್ವರನ ಮರಣ ನಂತರ ೧೨೬೧ರ ನಂತರ ಪಟ್ಟಾಭಿಷಕ್ಷನಾಗುತ್ತಾನೆ. ೧೨೭೧ರ ಮಧ್ಯದ ಅವಧಿಯಲ್ಲಿ ಅವನ ಆಡಳಿತ ಮುಕ್ತಾಯವಾಗುತ್ತದೆ. ಈ ಅವಧಿಯಲ್ಲಿ ಅವನ ಆಡಳಿತ ನಡೆಸುತ್ತಾನೆ. ಅವನ ಆಡಳಿತ ಕೊನೆಯ ವರ್ಷದಲ್ಲಿ ಈ ಶಾಸನ ರಚಿಸಲ್ಪಟ್ಟಿದೆ.

**೪. ದೇವಾಲಯದ ಘಂಟೆಯ ಮೇಲಿನ ಶಾಸನ :**

ಈ ಶಾಸನದಲ್ಲಿ ಶಾಲಿವಾಹನ ಶಕವರ್ಷ ೧೬೩೪ನೆಯ ನಂದನ ಶ್ರಾವಣ ಶುದ್ಧ ೫ರಂದು ಎಂದು ಇದೆ. ಅಂದರೆ ಕ್ರಿ.ಶ. ೨೭-೭-೧೭೧೨ರ ಭಾನುವಾರದಂದು ಬಾಗಳಿಯ ಇಮ್ಮಡಿ

ಬಸವನ ಮಗ ಮುಂಮಡಿ ಬಸವಂತರಾಯ ಇವನ ಮಗ ಮುಂಮಡಿ ಬಸವಪ್ಪ ನಾಯಕರು ಉಜ್ಜನಿ ಸಿದ್ಧೇಶ್ವರ ಪಾದಕ್ಕೆ ಈ ಘಂಟೆಯನ್ನು ಸಮರ್ಪಿಸುವ ವಿವರ ಹೊಂದಿದೆ.

**೫. ಉಜ್ಜನಿಯ ಸಿದ್ಧೇಶ್ವರ ದೇವಾಲಯದ ಗರ್ಭಗೃಹದ ಪಕ್ಕದಲ್ಲಿ ಬಿದ್ದರುವ ಶಾಸನ :**

ಉಜ್ಜನಿಯ ಸಿದ್ಧೇಶ್ವರ ದೇವಾಲಯದ ಗರ್ಭಗೃಹದ ಪಕ್ಕದಲ್ಲಿ ಬಿದ್ದರುವ ಈ ಶಾಸನವು ವಿಜಯನಗರ ಅರಸು ಅಚ್ಯುತದೇವರಾಯನ ಕಾಲಾವಧಿಯಲ್ಲಿ ರಚನೆಯಾಗಿದ್ದು, ಇದರ ಕಾಲ ಶಾಸನದಂತೆ ಶಾಲಿವಾಹನ ಶಕೆ ವರ್ಷ ೧೪೬೧ನೆಯ ವಿಕೃತ ನಾಮ ಸಂವತ್ಸರ ಭಾದ್ರಪದ ಶುದ್ಧ ೧೨ ಮಂಗಳವಾರ ಎಂದಿದ್ದು ಇದು ಆಗಷ್ಟು ೨೫ ಎಂದಿದ್ದು ಮಂಗಳವಾರಕ್ಕೆ ಸರಿ ಹೊಂದುತ್ತದೆ. ಕೃಷ್ಣದೇವರಾಯನ ನಂತರ ಬಂದ ಅಚ್ಯುತದೇವರಾಯ ಸಿದ್ಧೇಶ್ವರ ದೇವಸ್ಥಾನಕ್ಕೆ ಆನಂದ ನಿಧಿ ದಾನವನ್ನು ಕೊಟ್ಟದ್ದನ್ನು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬರೆಯಲಾಗಿದೆ. ಆನಂದ ನಿಧಿ ಎಂಬುವುದು ಈ ಕಾಲದ ವಿಶೇಷವಾಗಿರುವಂತ ದೇವಾಲಯಕ್ಕೆ ಕೊಡುವಂತಹ ದಾನವಾಗಿದೆ. ಇದನ್ನು ಗುರು ಹಿರೆಯರ ಪುಣ್ಯಕ್ಕಾಗಿ, ಒಳಿತಿಗಾಗಿ ನೀಡುವಂತಹ ದಾನವಾಗಿದೆ.

**೬. ಕಸವನಹಳ್ಳಿ ಶಾಸನ :**

ವಿಜಯನಗರದ ಅರಸ ವೀರ ವೆಂಕಟಪತಿ ಮಹಾರಾಯ ಪೆನೆಗೊಂಡದಿಂದ ಆಳುವ ಸಮಯದಲ್ಲಿ ಬಾಗಳಿಯ ಬಸಪ್ಪ ನಾಯಕನ ರಸವನಹಳ್ಳಿ ಪುರ ವರ್ಗದವರು ಸೇರಿ ಬಿದ್ದು ಹೋದ ಅರಮನೆಯನ್ನು ಉಜ್ಜನಿಯ ಮಠದ ಶಿಷ್ಯ ಗಿರಿ ಮಲ್ಲನ ಮಗ ಬಸವಣ್ಣನು ಇದರ ಜೀರ್ಣೋದ್ಧಾರದ ಕೆಲಸವನ್ನು ನೆರವೇರಿಸಿದನು. ಆ ಕಾರಣಕ್ಕಾಗಿ ಮಠದ ಗುರುಸ್ವಾಮಿ, ಮಳೆಸ್ವಾಮಿ, ಪಟ್ಟದಯ್ಯಗಳು, ಸಾಂತರಾವುತ್ತನ ಮಗ ಗಿರಿಮಲ್ಲಪ್ಪ ಅವನ ಮಗ, ಬಸವಯ್ಯ ಅವನ ಮಗ ತಿರುಕಪ್ಪನಿಗೆ ಎರೆ ಭೂಮಿಯನ್ನು ದಾನವಾಗಿ ಕೊಟ್ಟ ವಿಷಯವನ್ನು ಹೇಳುತ್ತದೆ.

ಕಸವನಹಳ್ಳಿಯ ಈ ಶಾಸನವು ಇತಿಹಾಸದ ದೃಷ್ಟಿಯಿಂದ ಅತ್ಯಂತ ಪ್ರಾಮುಖ್ಯವಾದದ್ದು. ಸಹಾತನ ರಾಯನ ಕಾಲಕ್ಕೆ ಉಜ್ಜನಿಯ ಮಠವು ಕಾಳಮುಖದ ಪರಂಪರೆಯಿಂದ ವೀರಶೈವ ಪರಂಪರೆಗೆ ಸ್ಥಿತ್ಯಂತರವಾಗುವ ಕಾಲಗಚ್ಚವಾದರೂ ಅದು ನಿದಿಷ್ಟವಾಗಿ ವೀರಶೈವೀಕರಣಗೊಳ್ಳುವುದು ಈ ಕಾಲಘಟ್ಟಕ್ಕೆ ವಿರಕ್ತ ಪರಂಪರೆಯಿಂದ ಗುರು ಪರಂಪರೆಗೆ ಹೊರಳುವ ಕಾಲಘಟ್ಟವಿ ಇದಾಗಿದೆ.

ಶೈವ ಪರಂಪರೆಯ ಶಾಖೆಗಳಾದ ನಕುಲೇಶ, ಪಾಶುದತ್ತ, ಕಾಳುಮುಖ ಹಾಗೂ ಕಾಪಾಲಿಕ ಪಂಥಗಳು ಈ ಪ್ರದೇಶದಲ್ಲಿ ವ್ಯಾಪಕವಾಗಿ ಹರಡಿದ್ದು ಕಂಡುಬರುತ್ತವೆ. ಕೊಟ್ಟೂರು, ಅಂಬಳಿಕೆ, ಸೋಗಿ, ಇಟಗಿ, ಉತ್ತಂಗಿ, ಹಡಗಲಿ, ಬಾಗಳಿ, ಕುಡಿತಿನಿ ಮೊದಲಾದ ಪ್ರದೇಶಗಳಲ್ಲಿ ಕಾಳಮುಖ ಶೈವವು ೧೧-೧೨ನೆಯ ಶತಮಾನದಲ್ಲಿ ಪ್ರವರ್ಧಮಾನವಾಗಿತ್ತು. ಆದರೆ ಕಾಪಾಲಿಕ ಪಂಥವನ್ನು

ಕುರಿತು ಶಾಸನ ದಾಖಲೆಗಳು ಇಲ್ಲದಿದ್ದು ಜನಪದರಲ್ಲಿ ಇಂದಿಗೂ ಚಿತ್ರದುರ್ಗ, ಬಳ್ಳಾರಿ ಪ್ರದೇಶಗಳ ಜನರ ಆಚರಣೆಗಳಲ್ಲಿ ಕಂಡುಬರುತ್ತವೆ. ಉಜ್ಜಿನಿಯಲ್ಲಿ ಬೆಟ್ಟದ ಭೈರವನಿರುವುದು ಕಾಪಾಲಿಕರಿದ್ದ ಸೂಚನೆಯನ್ನು ಕೊಡುತ್ತದೆ. ಭೈರವ ಆರಾಧನೆಯು ಕಾಪಾಲಿಕ ಮತ್ತು ಕಾಳಮುಖದಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಅಂದರೆ ೧೧-೧೨ನೆಯ ಶತಮಾನದಲ್ಲಿ ಕಾಪಾಲಿಕರು ಮತ್ತು ಕಾಳಮುಖರು ಇದ್ದ ಉದಾಹರಣೆಗಳು ಸಿಗುವುದರಿಂದ ಈ ಊಹೆಯನ್ನು ಮಾಡಲಾಗಿದೆ.

**ಬಸವಪ್ಪ ನಾಯಕನ ಉಲ್ಲೇಖವಿರುವ ಶಾಸನಗಳು :**

ವಿಜಯನಗರ ಕಾಲದಲ್ಲಿ ಹರಪನಹಳ್ಳಿ ಪಾಳೆಗಾರರಲ್ಲಿ ಒಬ್ಬರಾದ ಇವರು

೧. ಕ್ರಿ.ಶ. ೧೫೧೬ರ ಸೋಗಿಯ ಶಾಸನದಲ್ಲಿ (ಹ. ೧೦೬) ಇಮ್ಮಡಿ ಬಸಪ್ಪ ಒಡೆಯನ ಉಲ್ಲೇಖವಿದ್ದು, ಅವನ ತಾಯಿ ಪಾರ್ವತಿ ಅಮ್ಮನ ಉಲ್ಲೇಖ ಬರುತ್ತದೆ.

೨. ಕ್ರಿ.ಶ. ೧೫೮೦ರ ಕೊಟ್ಟೂರಿನ ಶಾಸನದಲ್ಲಿ ಬಾಗಳಿಯ ಮಾಚಿ ನಾಯಕನ ಮಕ್ಕಳ ವಾದಿ ನಾಯಕ ಎಂಬ ಉಲ್ಲೇಖವಿದೆ.

೩. ಕ್ರಿ.ಶ. ೧೬೪೪ರ ಮೈದೂರು ಶಾಸನದಲ್ಲಿ ಬಾಗಳಿ ಬಸವಪ್ಪ ನಾಯಕನನ್ನು 'ಮಹಾ ನಾಯಕ ಚಾರ್ಯ' ಎಂದು ಕರೆದಿದೆ.

೪. ೧೬೬೦ರ ಶಾಸನವು ಬಾಗಳಿ ಬಸವಪ್ಪ ನಾಯಕನು ತನ್ನನ್ನು ವೆಂಕಟಪತಿ ದೇವರಾಯನ ಮಗನೆಂದು ಕರೆದುಕೊಂಡಿದ್ದಾನೆ.

**೭. ಚೆನ್ನಮಾಜಿ ಶಾಸನ (೧೭೬೩) :**

ಸುಮಾರು ಕ್ರಿ.ಶ. ೧೭೬೩ರಲ್ಲಿ ಉಜ್ಜಿನಿ ಮತ್ತು ಚೆನ್ನಮಾಜಿ ಸಮಾಧಿ ಹಾಗೂ ಶಿವತತ್ವ ರತ್ನಾಕರ ಗ್ರಂಥದ ಪ್ರಕಾರ ಕೆಳದಿ ಚೆನ್ನಮಾಜಿ ತಮ್ಮ ಸಂಸ್ಥಾನದ ಅಸ್ಥಿರತೆ ಹಾಗೂ ಅನಾರೋಗ್ಯದಿಂದ ಇತಿಹಾಸವನ್ನು ಹೇಳುತ್ತದೆ. ಈ ಶಾಸನವನ್ನು ಈಗಲೂ ಉಜ್ಜಿನಿಯಲ್ಲಿ ನೋಡಬಹುದಾಗಿದೆ.

ಮರುಳಸಿದ್ಧೇಶ್ವರ ದೇವಾಲಯದಲ್ಲಿರುವ ಶಾಸನಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ದೇವಾಲಯ ಶೈವಧರ್ಮದ ಧಾರ್ಮಿಕ ಕೇಂದ್ರವಾಗಿ ಮಾರ್ಪಟ್ಟಿತೆಂದು ಕ್ರಿ.ಶ. ೧೨೬೮ರ ಅದೇ ಯಾದವ ಮಹಾದೇವರಾಯನ ಕಾಲದ ಶಾಸನ ಮಲ್ಲಿಕಾರ್ಜುನ ದೇವರು ಎಂದು ಉಲ್ಲೇಖಿಸುತ್ತದೆ. ಅಂದರೆ ಮಲ್ಲಿನಾಥ, ಮಲ್ಲಿಕಾರ್ಜುನ ಎಂದು ಪರಿವರ್ತನೆಯಾಗಿರುವುದು ಧಾರ್ಮಿಕ ಸ್ಥಿತ್ಯಂತರ ಮತಧರ್ಮ ಸಿದ್ಧಾಂತಗಳ ಬದಲಾವಣೆಯಿಂದ ಕಾಣಬಹುದು. ನಾಥಪಂಥದವರಿಂದ ಶೈವ ಆಚಾರ್ಯರ ಕೈಗೆ ದೇವಾಲಯದ ಪೂಜೆ ವ್ಯವಸ್ಥೆ ಸಿಕ್ಕಿರುವ ಸಾಧ್ಯತೆ ಇದೆ.

ವಿಜಯನಗರ ಆಳ್ವಿಕೆ ಮುಗಿದು ಸುಮಾರು ಒಂದು ಶತಮಾನದ ತನಕ ಈ ದೇವಾಲಯ ಶೈವ ಆಚಾರ್ಯರ ಹಿಡಿತದಲ್ಲಿತ್ತು. ನಂತರ ಕಾಲದಲ್ಲಿ ೧೨ನೆಯ ಶತಮಾನದಲ್ಲಿ ಉತ್ತರ ಭಾರತದಿಂದ ಬಂದ ಮರುಳಸಿದ್ಧೇಶ್ವರಿಂದ ವೀರಶೈವ ಧರ್ಮದ ಪ್ರಸಿದ್ಧ ಕೇಂದ್ರವಾಗಿರಬೇಕು. ಇವರು ಕೆಳವರ್ಗದವರಿಗೆ ಲಿಂಗದೀಕ್ಷೆ ನೀಡಿ ಸಮಾನತೆಯನ್ನು ಪ್ರತಿಪಾದಿಸಿ ಪ್ರಸಿದ್ಧರಾದರು. ಆದ್ದರಿಂದ ಈ ದೇವಾಲಯ ಮಲ್ಲಿಕಾರ್ಜುನ ಇದ್ದದ್ದು ಮರುಳಸಿದ್ಧ ಅಥವಾ ಸಿದ್ಧೇಶ್ವರ ದೇವಾಲಯವಾಗಿದೆ ಎಂದು ಹೇಳಬಹುದಾಗಿದೆ.

**೨.೩. ಉಜ್ಜನಿ ಪರಿಸರದ ಧಾರ್ಮಿಕತೆ :**

೧೨ನೆಯ ಶತಮಾನ ಕರ್ನಾಟಕ ಧಾರ್ಮಿಕ ಇತಿಹಾಸದಲ್ಲಿ ಅತ್ಯಂತ ಪ್ರಮುಖ ಕಾಲ ಘಟ್ಟವಾಗಿದೆ. ಜೈನ, ವೈಷ್ಣವ ಮತ್ತು ಶೈವ ಪರಂಪರೆಯು ಈ ನಾಡಿನ ತುಂಬೆಲ್ಲ ಹರಡಿರುವುದು ಕಾಣುತ್ತವೆ. ಜೈನ ಧರ್ಮವು ೧೧ನೆಯ ಶತಮಾನ ಆಗಲೇ ತನ್ನ ಅಸ್ತಿತ್ವವನ್ನು ಇಳಿಮುಖಗೊಳಿಸಲು ಪ್ರಾರಂಭಿಸಿತು. ಬಳ್ಳಾರಿ ಜಿಲ್ಲೆಯಲ್ಲಿ ಕೋಗಳಿ ಜೈನರ ಪ್ರಮುಖ ಕೇಂದ್ರವಾಗಿದ್ದು, ೧೧ನೆಯ ಶತಮಾನದ ತನಕ ಹೆಚ್ಚಿನ ಉನ್ನತಿಯನ್ನು ಹೊಂದಿತ್ತು. ೧೧ನೆಯ ಶತಮಾನದ ನಂತರದಲ್ಲಿ ಈ ಪ್ರದೇಶದಲ್ಲಿ ಜೈನರು ಮರೆಯಾಗಿ ಹೋಗುತ್ತಾರೆ. ಅದಕ್ಕೆ ಬದಲಾಗಿ ಶೈವರು ಈ ಪ್ರದೇಶದ ಧಾರ್ಮಿಕ ಕ್ಷೇತ್ರದಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದುತ್ತಾರೆ. ಮಾಡಲಗೇರಿ, ಹೊಳಗುಂದಿ, ಮಾನ್ಯರಮಾಸಲವಾಡ, ಹೊಸಪೇಟೆ, ಬಲ್ಲಕುಂದಿ ಮೊದಲಾದ ಕಡೆಗಳಲ್ಲಿ ಜೈನರು ಇದ್ದ ಉದಾಹರಣೆಗಳು ದೊರೆಯುತ್ತವೆ. ಈ ಊರುಗಳಲ್ಲಿ ದೊರಕಿರುವ ಶಾಸನಗಳು, ಬಸದಿಗಳು ಇವನ್ನು ಸಾಬೀತು ಮಾಡುತ್ತವೆ. ಇವೆಲ್ಲ ಕಾಲದ ದವಡೆಯಲ್ಲಿ ಸಿಲುಕಿ ಶೈವೀಕರಣಗೊಂಡಿರುವುದು ಕಂಡುಬರುತ್ತದೆ.

ವೈಷ್ಣವ ಧರ್ಮ ಈ ಪ್ರದೇಶದಲ್ಲಿ ಹೆಚ್ಚು ಕಂಡುಬರುವುದಿಲ್ಲ. ಮಾಗಳ ಇತರಗಳಲ್ಲಿ ದೊರೆಕಿರುವ ಶೈವ, ವೈಷ್ಣವ ದೇವಾಲಯಗಳನ್ನು ಹೊರತುಪಡಿಸಿದರೆ ವೈಷ್ಣವ ಪರಂಪರೆ ಹೆಚ್ಚು ಪ್ರಬಲವಾಗಿರುವುದಿಲ್ಲ. ಬಳ್ಳಾರಿ ಪ್ರದೇಶದಲ್ಲಿ ಶೈವರನ್ನು ಅತ್ಯಂತ ಪ್ರಮುಖವಾದಂತಹ ಪಂಥವಾಗಿ ಕಾಣುತ್ತದೆ. ಅದರಲ್ಲಿ ಕಾಳಮುಖ ಪರಂಪರೆಯ ಶೈವರು ಈ ಪ್ರದೇಶದಲ್ಲಿ ಸುಮಾರು ೧೦ನೆಯ ಶತಮಾನದಿಂದ ಅತ್ಯಂತ ಪ್ರಬಲ ಮತ್ತು ಪ್ರಮುಖವಾದ ಧರ್ಮವಾಗಿ ಕಂಡುಬರುತ್ತದೆ. ಕಾಳಮುಖ ಪರಂಪರೆ ಸುಮಾರು ೫ನೆಯ ಶತಮಾನದಿಂದ ಕರ್ನಾಟಕದ ಪ್ರಮುಖ ಧರ್ಮವಾಗಿ ಬೆಳೆದುಬಂತು. ಶಿಕಾರಿಪುರ ತಾಲೂಕಿನ ತಾಳಗುಂದ ಕ್ರಿ.ಶ. ಆದಿಭಾಗದಿಂದಲೂ ಆರಾಧನೆಗೊಳ್ಳುವ ಕೇಂದ್ರವಾಗಿತ್ತು. ಶಾತವಾಹನರ ಕಾಲದಲ್ಲಿ ಮಟಪಟ್ಟಿಯ ದೇವರ ಉಲ್ಲೇಖ ಬರುತ್ತದೆ. ಕ್ರಿಪೂ. ೧ನೆಯ ಶತಮಾನದಿಂದಲೂ ಶೈವಪಂಥ ಪ್ರಮುಖವಾದ ಧಾರ್ಮಿಕ ಪಂಥವಾಗಿ ಕಂಡುಬರುತ್ತದೆ.

ಶೈವ ಪರಂಪರೆಯಲ್ಲಿ ನಾಲ್ಕು ಪ್ರಮುಖವಾದ ಶೈವ ಶಾಖೆಗಳಿವೆ. ಶಂಕರಾಚಾರ್ಯರ ಶ್ರೀಭಾಷದಿಂದ ಸಾಯಣ ಮಾದವರ ಶ್ರೀಭಾಷ್ಯದವರೆಗೂ ಅನೇಕರು ಈ ಶೈವ ಶಾಖೆಗಳನ್ನು ಉಲ್ಲೆಖಿಸಿದ್ದಾರೆ. ವಾಚಸ್ಸಿಮಿತ್ರ, ವಿಶ್ವನಾಥ, ಯಾಮನಚಾರ್ಯ, ರಾಮಾಜುನಚಾರ್ಯ ಈ ಶಾಸನವನ್ನು ಉಲ್ಲೇಖಿಸುತ್ತಾರೆ. ಅಭ್ರಮಾಣ್ಯ ಅಥವಾ ಅವೈದಿಕ ಸಂಸ್ಕೃತಿಯಾದ ಈ ನೆಲದ ಧಾರ್ಮಿಕ ಆಚರಣೆಯ ಭಾಗವಾಗಿ ರೂಪಗೊಂಡಂತಹ ಇದು ವೈಧಿಕರಲ್ಲಿ ರುದ್ರನಾಗಿ ಕಾಣುತ್ತಾನೆ. ವೇದಗಳಲ್ಲಿ ರುದ್ರನು ಅನಾಹುತ ಉಂಟುಮಾಡುವ ದೇವರಾಗಿ ಕಂಡುಬಂದರೆ, ಉಪನಿಷತ್ತಿನ ಕಾಲಕ್ಕೆ ಸೌಮ್ಯನಾದ ರುದ್ರನಾಗಿ ಶಿವನಲ್ಲಿ ಮಿಲಿತಗೊಳ್ಳುತ್ತಾನೆ. ಹೀಗೆ ಮಿಲಿತಗೊಂಡ ರುದ್ರ ಶಿವನು ಪುರಾಣಗೊಳಿಸಲ್ಪಟ್ಟ ಸೃಷ್ಟಿಸ್ಥಿತಿ ಲಯಕರ್ತನಾಗಿ ಕಾಣುತ್ತಾನೆ.

ಆದರೆ ಇದಕ್ಕೆ ವಿರುದ್ಧವಾಗಿ ಅವೈದಿಕ ಪರಂಪರೆಯಲ್ಲಿ ತನ್ನ ಮೂಲ ರೂಪವನ್ನು ವೃದ್ಧಿಸಿಕೊಂಡ ಶಿವ ಮೂಲ ರೂಪವಾಗಿ ಮುಂದುವರಿಯುತ್ತಾನೆ. ಇಲ್ಲಿ ಲಿಂಗಾಧಾರನೆ ರೂಪದಲ್ಲಿ ಶಿವ ತನ್ನ ಆರಾಧನೆಯ ಸ್ವರೂಪವನ್ನು ಪಡೆಯುತ್ತಾನೆ. ಹರಪ್ಪಾ ಮಹೆಂಜೋದಾರ ಕಾಲದಿಂದಲೂ ಲಿಂಗದ ಪರಿಕಲ್ಪನೆ ಕಾಣುತ್ತೇವೆ. ಇಲ್ಲಿ ಕಾಣುವ ಪಶುಗಳೊಡನೆ ಇರುವ ವ್ಯಕ್ತಿಯನ್ನು ಶಿವನೆಂದು ಗುರುತಿಸಲಾಗಿದೆ. ಹೀಗೆ ಮುಂದವರೆದು ತನ್ನದೇ ಆದಂತಹ ಆಚರಣೆಗಳನ್ನು ರೂಪಿಸಿಕೊಳ್ಳುತ್ತ ಹೋಗುತ್ತಾನೆ. ಈ ಹಿನ್ನೆಲೆಯಲ್ಲಿ ಶೈವರನ್ನು ನಾಲ್ಕು ವಿಭಾಗವಾಗಿ ವಿಂಗಡಿಸಿಕೊಳ್ಳಲಾಗಿದೆ.

೧. ಪಾಶುಪತ

೨. ಲಕುಲಿಶ ಪಾಶುಪತ ಅಥವಾ ಕಾಳಮುಖ

೩. ಕಾಪಾಲಿಕ/ಮಹಾಖುತಿ ಅಥವಾ ಸೋಮ ಸಿದ್ಧಾಂತಿ

೪. ಶ್ರೋತ್ರಿಯ ಶೈವ

ಈ ನಾಲ್ಕು ಶಾಖೆಗಳು ಪ್ರಧಾನವಾಗಿ ಕರ್ನಾಟಕದಲ್ಲಿ ಕಾಣುತ್ತವೆ. ೭ನೆಯ ಶತಮಾನದ ಕೆಗ್ಗದ ಶಾಸನವು ಪಾಶುಪತ ಉಲ್ಲೇಖ ಮಾಡಿದರೆ, ನಂತರದಲ್ಲಿ ೯ನೆಯ ಶತಮಾನದ ಆದಿಭಾಗದಲ್ಲಿ ಕಾಳಮುಖ ಶೈವವು ಪ್ರಬಲವಾಗಿ ಮತ್ತು ವ್ಯಾಪಕವಾಗಿ ಕಂಡುಬರುತ್ತದೆ. ಕಾಪಾಲಿಕರು ಕರ್ನಾಟಕದಲ್ಲಿ ಇದ್ದ ಉಲ್ಲೇಖಗಳು ಅಲ್ಪವಾದರೂ ಶ್ರೀಶೈಲ ಅವರ ಪ್ರಧಾನ ಕೇಂದ್ರವಾಗಿತ್ತೆಂದು ಸಂಸ್ಕೃತ ನಾಟಕ ಮತ್ತು ಸಾಹಿತ್ಯದಲ್ಲಿ ಕಂಡುಬಂದಿದೆ. ಅದಕ್ಕೆ ಪೂರಕವಾಗಿ ಈ ಪ್ರದೇಶದಲ್ಲಿ ಕಾಪಾಲಿಕ ಶಾಸನದ ಉಲ್ಲೇಖ ಕಂಡುಬರುತ್ತದೆ. ಆದರೆ ಜನಪದೀಯ ನೆಲೆಗಟ್ಟಿನಲ್ಲಿ ಕಾಪಾಲಿಕರು ಇದ್ದ ಐತಿಹ್ಯಗಳು ಇಂದಿಗೂ ದೊರೆಯುತ್ತವೆ. ಅದರಲ್ಲೂ ಬಳ್ಳಾರಿ,

ಚಿತ್ರದುರ್ಗ ಪ್ರದೇಶದಲ್ಲಿ ಕಾಪಾಲಿಕ ಎಂಬ ಸಮುದಾಯವನ್ನು ಕಾಣಬಹುದು. ಕಾಪಾಲಿಕರು ವಾಸ್ತವಾಗಿ ಊರಿನಿಂದ ಆಚೆ ಸ್ಮಶಾನದಲ್ಲಿ ಗೌಪ್ಯ ಆಚರಣೆಯನ್ನು ಮಾಡುವವರಾಗಿದ್ದಾರೆ. ಬಲಿದಾನ, ನರಬಲಿಯ ಮೂಲಕ ವಲಿಸಿಕೊಳ್ಳುವ ಕಾರಣ ಅವರನ್ನು ಊರಿಂದಾಚೆ ಬಹಿಷ್ಕೃತರಂತೆ ಇಡಲಾಗಿತ್ತು. ಕಾಪಾಲಿಕರನ್ನು ಮಹಾಖುತಿಗಳು ಅಥವಾ ಸೋಮ ಸಿದ್ಧಾಂತಿಗಳೆಂದು ಕರೆಯಲಾಗಿದೆ. ಇತ್ತೀಚಿಗೆ ಉಪಲಬ್ದವಾದ ಶಾಸನ ಒಂದರಲ್ಲಿ (ಡಾ. ಕಲವೀರ ಮನ್ವಾಚಾರ್, ಕೊಪ್ಪಳದ ೩೨ನೆಯ ಕ.ಇ.ಆ. ಸಮ್ಮೇಳನದಲ್ಲಿ ಪ್ರಬಂಧದಿಂದ ಆರಿಸಿಕೊಳ್ಳಲಾಗಿದೆ) ಈ ಮಾಹಿತಿಯನ್ನು ತಿಳಿಯಲಾಗಿದೆ. ಆದರೆ ೧೨ನೆಯ ಶತಮಾನದ ನಂತರದಲ್ಲಿ ಕರ್ನಾಟಕದಲ್ಲಿ ಕಾಪಾಲಿಕರು ಕಣ್ಮರೆಯಾಗಿದ್ದಾರೆ.

ಕಾಳಮುಖರು ಪ್ರಥಮ ಉಲ್ಲೇಖ (ಕೋಲಾ ಜಿಲ್ಲಾ ಸಂ) ನಂದಿಯ ಕ್ರಿ.ಶ. ೮೦೪-೮೧೦ರ ಕಾಲದ ಶಾಸನದಲ್ಲಿ ಶಕ್ತಿ ಪರಿಷೆಯ ಉಲ್ಲೇಖವಾಗುತ್ತದೆ. ಅಣಜಿ, ಮಿನಾಪುರಂ ಶಾಸನಗಳಲ್ಲಿ ಕಾಳಮುಖರ ಪ್ರಸ್ತಾಪವಾಗುತ್ತದೆ. ಕಾಳಮುಖರು ಕರ್ನಾಟಕದಲ್ಲಿ ಸುಮಾರು ೮ನೆಯ ಶತಮಾನದಿಂದ ೧೨೫೦ರ ತನಕ ಅತ್ಯಂತ ಪ್ರಬಲವಾದ ಧಾರ್ಮಿಕ ಪಂಥವಾಗಿ ಹೊರಹೊಮ್ಮಿತ್ತು. ದೇವಾಲಯಗಳ ನಿರ್ಮಾಣ ಮತ್ತು ನಿರ್ವಹಣೆ ಅವರ ಪ್ರಧಾನ ಕಾರ್ಯವಾಗಿದ್ದು ಕಂಡುಬರುತ್ತದೆ. ಯಾವುದೇ ಜಾತಿ, ವರ್ಣದ ಪರಿಕಲ್ಪನೆ ಇಲ್ಲದ ಈ ಪಂಥದಲ್ಲಿ ಭಕ್ತಿಯ ಮೂಲಕ ಶಿವನನ್ನು ಒಲಿಸಿಕೊಳ್ಳಬಹುದೆಂಬ ಸಿದ್ಧಾಂತದ ಮೂಲಕ ಎಲ್ಲರೂ ಮೋಕ್ಷವನ್ನು ಹೊಂದಬಹುದೆಂಬ ಸಿದ್ಧಾಂತವನ್ನು ರೂಪಿಸಿದರು. ಅದರಲ್ಲೂ ಲಿಂಗವನ್ನು ಪ್ರತಿಷ್ಠಾಪಿಸಿದರೆ ಅವನೇ ಲಿಂಗವಾಗುತ್ತಾನೆ ಎನ್ನುವ ಮೂಲಕ ವೈದಿಕ ಹವನ ಹೋಮೋದ್ಧಾರವನ್ನು ನಿರಾಕರಿಸುತ್ತಾರೆ. ಕಾಳಮುಖರಲ್ಲಿ ೨ ಪಂಗಡಗಳಿವೆ.

೧ ಶಕ್ತ ಪರಿಷೆ

೨. ಸಿಂಹ ಪರಿಷೆ

ಶಕ್ತ ಪರಿಷೆಯು ಬಳ್ಳಿಗಾವಿ, ಬಿಜಾಪುರ, ಮುತ್ತಗಿ, ಲಕ್ಷ್ಮೇಶ್ವರದ ಸೂಡಿ, ಬೆಳಗಾವಿಯ ಹೂಲಿ ಮುಂತಾದ ಪ್ರದೇಶಗಳಲ್ಲಿ ಕಾಳಮುಖ ಶಕ್ತಿ ಪರಿಷೆಯು ಕಂಡುಬರುತ್ತದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಬಳ್ಳಿಗಾವಿಯ ಕೇದಾರಮಠ ಉಳಿದ ಪಂಚಮಠವು ಹೆಚ್ಚು ಪ್ರಭಾವವಾಗಿ ೧೫೦ ವರ್ಷಗಳ ಸುದೀರ್ಘ ಇತಿಹಾಸವನ್ನು ಹೊಂದಿದೆ. ಕಾಳಮುಖರು ಸಕಲ ವೇದಶಾಸ್ತ್ರ ಪುರಾಣ ಪ್ರಕರಣ ಪಂಡಿತರಾಗಿದ್ದಾರೆಂದು ಶಾಸನಗಳು ಹೇಳುತ್ತವೆ.

ಸಿಂಹ ಪರಿಷೆಯು ಶ್ರೀಶೈಲವನ್ನು ಕೇಂದ್ರವಾಗಿಟ್ಟುಕೊಂಡು ಗುಲ್ಬರ್ಗಾ ಜಿಲ್ಲೆ ಯಡ್ರಾವಿಯಲ್ಲಿ ಕಂಡುಬರುತ್ತದೆ. ಸಿಂಹ ಪರಿಷೆಯು ಗುಲ್ಬರ್ಗಾ, ಬಳ್ಳಾರಿ, ರಾಯಚೂರುಗಳಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ

ಕಂಡುಬರುತ್ತದೆ. ಕುರುವತ್ತಿ, ಹಡಗಲಿ, ಹೊಳಲು, ಬಾಗಳಿ, ಮಾಗಳಿ, ಸೋಗಿ, ಇಟಗಿ, ಕುರುಗೋಡ, ಕೊಟ್ಟೂರು, ಅಂಬಳಿ ಮೊದಲಾದ ಪ್ರದೇಶಗಳಲ್ಲಿ ಕಾಳಮುಖ ಪರಿಷೆಯ ಪರಂಪರೆ ಕಂಡುಬರುತ್ತದೆ. ಅದರಲ್ಲಿ ಉಜ್ಜನಿಯು ಕೂಡ ಒಂದು. ಇಲ್ಲಿ ಇಂದಿನ ಸಿದ್ಧೇಶ್ವರ ದೇವಾಲಯ ಪ್ರಾಚೀನ ಕಾಲದಲ್ಲಿ ಮಲ್ಲಿನಾಥ, ಮಲ್ಲಿಕಾರ್ಜುನ ಎಂದು ಕರೆಯಲಾಗುತ್ತಿದ್ದು, ಲಕಲೇಶ ಪಾಶುಪತ/ಕಾಳಮುಖ ಪಂಥವು ಇಲ್ಲಿ ಪ್ರಮುಖ ಧಾರ್ಮಿಕ ಪಂಥವಾಗಿತ್ತು. ಇಲ್ಲಿ ಕಾಣುವ ಯತಿಶಿಲ್ಪಗಳು ಇದನ್ನು ಸಾಬೀತುಪಡಿಸುತ್ತವೆ.

## ಅಡಿ ಟಿಪ್ಪಣಿ

೧. ಕನ್ನಡ ನಿಘಂಟು

೨. ಕನ್ನಡ ವಿ.ವಿ. ಬಳ್ಳಾರಿ ಜಿಲ್ಲಾ ಶಾಸನ ಸಂಪುಟ–೧

೩. ಕರ್ನಾಟಕ ಚರಿತ್ರೆ ಸಂಪುಟ–೧, ಪ್ರೊ. ಬಿ. ಷೇಕ್‌ಅಲಿ, ೨೦೧೮, ಪು.೩೬೯–೩೯೦

೪. ಅದೇ, ಪು.೩೯೦–೪೨೭

೫. ಕರ್ನಾಟಕ ಚರಿತ್ರೆ ಸಂಪುಟ–೨

೬. ಅದೇ, ಪು.೨೬–೮೪

೭. ಕರ್ನಾಟಕ ಚರಿತ್ರೆ ಸಂಪುಟ–೩

೮. ಅದೇ, ಪು.೧೦–೪೭

೯. ಅದೇ, ಪು.೭೫–೮೯

೧೦. ಅದೇ, ಪು.೧೪೧–೧೭೮

೧೧. ಡಾ. ದೇವರಕೊಂಡಾರೆಡ್ಡಿ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ–೧ ಪು.೨೨೭–೨೩೦

೧೨. ಅದೇ, ಪು.೨೨೮

೧೩. ಅದೇ, ಪು.೨೨೯

೧೪. ಅದೇ, ಪು.೨೩೦

# ಅಧ್ಯಾಯ – ಮೂರು

# ಉಜ್ಜನಿ ಗ್ರಾಮದ ಐತಿಹ್ಯಗಳು

**೩.೧. ಪುರಾಣ ಐತಿಹ್ಯ :**

ಹಲವಾರು ಹಳ್ಳಿಯ ಜನರು ಪುರಾಣದ ಅನೇಕ ಸಂದರ್ಭಗಳು, ಘಟನೆಗಳು ತಮ್ಮ ಊರಲ್ಲಿ ನಡೆದು ಹೋಗಿವೆ ಎಂದು ಹೇಳಿಕೊಳ್ಳುವಂತೆ ಉಜ್ಜನಿ ಜನರೂ ಕೂಡ ಅಂತದ್ದನ್ನೇ ನಮ್ಮ ಊರಲ್ಲಿ ನಡೆದು ಹೋಗಿವೆ ಎಂದು ಹೇಳಿಕೊಂಡು ಅಭಿಮಾನಪಡುತ್ತಾರೆ.

**೧. ವಟವೃಕ್ಷ ಅಥವಾ ಸಿದ್ಧವರ್ತಿ :**

ಮರುಳುಸಿದ್ಧೇಶ್ವ ದೇವ ಸಂಚಾರ ಮಾಡುತ್ತಾ ಇರುವಾಗ ಭಕ್ತರೊಂದಿಗೆ ಉತ್ತರ ಪ್ರದೇಶದ ಕಡೆಯಿಂದ ಬಂದು ಉಜ್ಜನಿಗೆ ಹತ್ತಿರದಲ್ಲಿರುವ ಒಂದು ಆಲದ ಮರದ ನೆರಳಿನಲ್ಲಿ ವಿಶ್ರಾಂತಿ ಪಡೆದು ನಂತರ ಅವರು ಲಿಂಗ ಪೂಜೆಗೆ ನೀರ ಬೇಕಾದ್ದರಿಂದ ಸ್ವಾಮಿಗಳು ಅಲ್ಲಿಯೇ ಒಂದು ನೀರನ ವರ್ತಿಯನ್ನು ತಗೆದರು. ನಂತರ ತಮ್ಮ ಪೂಜೆ ಸೇವೆಯನ್ನು ಮುಗಿಸಿಕೊಂಡರೆಂಬ ಐತಿಹ್ಯದ ಕಾರಣ ಈ ನೀರಿನ ವರ್ತಿಯನ್ನು ಇಂದಿಗೂ ಸಹ ನೋಡಬಹುದು. ಇದಕ್ಕೆ ಉಜ್ಜನಿ ಜನರು ಸಿದ್ಧನ ವರ್ತಿ ಎಂದು ಅಥವಾ ವಟವೃಕ್ಷವೆಂದು ಕರೆಯುತ್ತಾರೆ. ಎಂದು ಉಜ್ಜನಿಯ ದೊಡ್ಡಬಸಪ್ಪ ಹೇಳುತ್ತಾರೆ.

**೨. ಜಟ್ಟಲಿಂಗೇಶ್ವರ ಗುಡಿ :**

ಈ ಗುಡಿಯು ಮರುಳಸಿದ್ಧೇಶ್ವರ ಗುಡಿ ಹಿಂದಕ್ಕೆ ಅಂದರೆ ದಕ್ಷಿಣ ದಿಕ್ಕಿನ ಕಡೆಗೆ ಉತ್ತರಾಭಿಮುಖವಾಗಿದೆ. ಈ ಗುಡಿಯಲ್ಲಿ ಒಂಬತ್ತು ಚಪ್ಪಟೆಯಾದ ಶಿಲಾ ವಿಗ್ರಹಗಳು ಒಂದೇ ಸಾಲಿನಲ್ಲಿವೆ. ಈ ಊರಿನ ತಳವಾರ ವಂಶಸ್ಥರು ಈ ವಿಗ್ರಹಗಳಿಗೆ ಪೂಜಾ ಸೇವಕರಾಗಿರುತ್ತಾರೆ.

ಮರುಳಸಿದ್ಧೇಶ್ವರ ಗುಡಿಗೆ ಪೂಜೆಗಾಗಿ ಹೋಗುವ ಭಕ್ತರು ಮೊದಲು ಜಟ್ಟಿಲಿಂಗೇಶ್ವರ ಗುಡಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಇಂದಿಗೂ ಸಹ ಉಜ್ಜಿನಿಯಲ್ಲಿ ಎಲ್ಲಾ ಜನಾಂಗದವರು ಮೊದಲು ಜಟ್ಟಿಲಿಂಗೇಶ್ವರ ಪೂಜೆಯಿಂದ ಆಶೀರ್ವಾದ ಪಡೆಯುತ್ತಾರೆ. ಈತನು ಸಿದ್ಧೇಶ್ವರನ ಪರಮ ಶಿಷ್ಯನಾಗಿದ್ದನು. ಈತನು ಸತ್ಯ ಮಾರ್ಗದಲ್ಲಿ ನಡೆಯುತ್ತ ಬಂದು ಮರುಳಸಿದ್ಧನ ಶಿಷ್ಯನಾದ್ದರಿಂದ ಯಾವಾಗಲು ಭಕ್ತರಿಂದ ಪ್ರಥಮ ಪೂಜೆ ಸಲ್ಲಲೆಂದು 'ವರ'ವನ್ನು ನೀಡಿದರೆಂಬ ಐತಿಹ್ಯವಿದೆ.

**೩. ಮೈಲಾರಲಿಂಗನ ಬಂಡೆ :**

ಈ ಬಂಡೆಯು ಮರುಳಸಿದ್ಧೇಶ್ವರ ಗುಡಿಯ ಹಿಂದಕ್ಕೆ ಅಂದರೆ ದಕ್ಷಿಣಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿದೆ. ಈ ಬಂಡೆಯ ಮೇಲೆ ಎರಡು ಲಿಂಗಗಳು ಹಾಗೂ ಪಾದಗಳೂ ಇವೆ. ಈ ಬಂಡೆಯ ಮೇಲೆ ಸಣ್ಣ ಗುಡಿಯನ್ನು ಕಟ್ಟಿರುತ್ತಾರೆ. ಕುರುಬ ಜನಾಂಗದವರು ಇಂದಿಗೂ ಸಹ ಪೂಜಾ ಸೇವಕರಾಗಿದ್ದಾರೆ. ತಮ್ಮ ಶಿಷ್ಯನಾದ ಮೈಲಾರಲಿಂಗೇಶ್ವರ ತನಗೆ ನಿಜಾಂಶದ ಮಾಹಿತಿ ಹೇಳಿದ್ದರಿಂದ ಸಿಟ್ಟುಗೊಂಡು ಮರುಳಸಿದ್ಧೇಶ್ವರ ಮೈಲಾರಲಿಂಗನು ಉಜ್ಜಿನಿ ಊರ ಹೊರಗೆ ಇರಲಿ ಎಂದು ಶಾಪಕೊಟ್ಟನಂತೆ ಎಂಬ ಐತಿಹ್ಯ ಇದೆ. ಈ ಕಾರಣದಿಂದ ಈ ಬಂಡೆಯು ಊರ ಹೊರಗೆ ಈಗಲೂ ಇದೆ.

(ವಿಶೇಷವೆಂದರೆ ಈಗಲು ಕೂಡ ಮರುಳಸಿದ್ಧನ ಮನೆ ದೇವರ ವಕ್ಕಲಿನವರ ಜೊತೆ ನೆಂಟಸ್ಥಿಕೆ ಬೆಳಸುದಿಲ್ಲ. ಆದ ಕಾರಣ ಮರುಳಸಿದ್ಧನಿಗೂ ಮೈಲಾರಲಿಂಗಪ್ಪನಿಗೂ ಆಗುವುದಿಲ್ಲ ಎಂದು ಹೇಳುತ್ತಾರೆ)

**೪. ಮೆಸಲಟ್ಟಿ ಬಸವಣ್ಣ :**

ಇದು ಮರುಳಸಿದ್ಧನ ಗುಡಿಯ ಹಿಂದಕ್ಕೆ ಮೈಲಾರಲಿಂಗನ ಬಂಡೆಗೆ ಸ್ವಲ್ಪ ಹತ್ತಿರದಲ್ಲಿದ್ದು, ಬಸವಣ್ಣನ ವಿಗ್ರಹವು ಉತ್ತರಾಭಿಮುಖವಾಗಿದೆ. ಇದರ ಪಕ್ಕದಲ್ಲಿ ಒಂದು ಉದ್ಭವ ಶಿಲೆಯೊಂದಿದೆ. ಇದಕ್ಕೆ ಮರುಳಸಿದ್ಧೇಶ್ವರ ಎಂದು ಕರೆಯುತ್ತಾರೆ. ಮರುಳಸಿದ್ಧ ತಮ್ಮ ಶಿಷ್ಯರಾದ ಜಟ್ಟಿಲಿಂಗೇಶ್ವರ, ಭೈರವಸಿದ್ಧ, ಮೈಲಾರಲಿಂಗ ಇವರೊಡನೆ ಈ ಸ್ಥಳದಲ್ಲಿ ಸೇರಿ ತಾವು ಮುಂದೆ ಎಲ್ಲೆಲ್ಲಿ ನೆಲೆಸಬೇಕೆಂದು ಎಂಬ ವಿಚಾರದ ಮಸಲತ್ತು ಮಾಡಿದರೆಂಬ ಐತಿಹ್ಯವಿದೆ. ಇದಕ್ಕೆ ಮೆಸಲಟ್ಟಿ ಬಸವಣ್ಣ ಎಂದು ಕರೆಯುತ್ತಾರೆ.

**೫. ಭೈರವಸಿದ್ಧನ ಗುಡ್ಡ :**

ಈ ಗುಡ್ಡವು ಉಜ್ಜಿನಿಗೆ ಸುಮಾರು ೫ ಕಿ.ಮೀ. ದೂರದಲ್ಲಿ ಉತ್ತರ ದಿಕ್ಕಿನ ಕಡೆಗೆ ಇದೆ. ಇದಕ್ಕೆ ಭೈರವ ದೇವರಗುಡ್ಡ ಎಂದು ಕರೆಯುತ್ತಾರೆ. ಈ ಗುಡ್ಡದ ಮೇಲೆ ಮಧ್ಯಭಾಗದಲ್ಲಿ ಒಂದು

ಗವಿಯಲ್ಲಿ ಕಾಲುಮುರಿದ ಒಂದು ಶಿಲಾ ವಿಗ್ರಹವಿದೆ. ಇದಕ್ಕೆ 'ಭೈರವಸಿದ್ಧ' ಅಥವಾ ಭೈರಸಿದ್ಧ'ನೆಂದು ಕರೆಯುತ್ತಾರೆ. ತನ್ನ ಸಿದ್ಧನಾದ ಭೈರವಸಿದ್ಧನು ಶ್ರೀ ಮರುಳಸಿದ್ಧೇಶ್ವರನಿಗೆ ನಿಜಾಂಶದ ಮಾಹಿತಿ ನೀಡದಿದ್ದರಿಂದ ಈ ನಿಜಾಂಶವನ್ನು ತನ್ನ ಇನ್ನೊಬ್ಬ ಶಿಷ್ಯನಾದ ಜಟ್ಟಿಲಿಂಗ ತಿಳಿದ ಮೇಲೆ ಸಿಟ್ಟಿಗೆದ್ದ ಮರುಳಸಿದ್ದ ಭೈರವಸಿದ್ಧನನ್ನು ಕಾಲುಮುರಿಯುವಾಗ ಹಾಗೆ ಹೊಡೆದು ಉಜ್ಜನಿಗೆ ಹತ್ತಿರದ ಒಂದು ಗುಡ್ಡದ ಗವಿಯಲ್ಲಿ ನೆಲೆಸೆಂದು ಶಾಪಕೊಟ್ಟನು ಎಂದು ವಾಡಿಕೆ ಇಲ್ಲಿದೆ. ಇಂದಿಗೂ ಸಹ ಕಾಲುಮುರಿದ ಭೈರವಸಿದ್ಧನ ಮೂರ್ತಿಯನ್ನು ಗುಡ್ಡದ ಮೇಲಿನ ಗವಿಯಲ್ಲಿ ನೋಡಬಹುದು. ವಡ್ಡರ ಜನಾಂಗದವರು ಪೂಜಾ ಸೇವಕರಾಗಿದ್ದಾರೆ. (ಸದ್ಧರ್ಮ ಸಂಚಿಕೆಯಿಂದ)

**೬. ಮೂಗಣ್ಣನ ಗುಡಿ :**

ಈ ಗುಡಿಯು ಉಜ್ಜನಿಗೆ ಪಶ್ಚಿಮ ದಿಕ್ಕಿನಲ್ಲಿ ಸುಮಾರು ೮ ಕಿ.ಮೀ. ದೂರದಲ್ಲಿದೆ. ಈ ಗುಡಿಯಲ್ಲಿ ಒಂದು ಉದ್ಭವ ಶಿಲಾಲಿಂಗವಿದೆ. ಇದಕ್ಕೆ 'ಶಿರಿಭಿ ಮೂಗಣ್ಣ' ಅಥವಾ ಮೂಗ ಬಸವೇಶ್ವರ ಎಂದು ಕರೆಯುತ್ತಾರೆ. ಇತ್ತೀಚೆಗೆ ಈ ಗುಡಿಯ ನಿರ್ಮಾಣವು ಭಕ್ತರಿಂದ ಹೊಸರೂಪ ತಾಳಿದೆ. ಶ್ರೀ ಮರುಳಸಿದ್ದರು ಸಂಚಾರ ಮಾಡುತ್ತಾ ಈ ಸ್ಥಳಕ್ಕೆ ಬಂದಾಗ ನೂರಾರು ದನಗಳ ಗುಂಪನ್ನು ಮೂಕನಂತೆ ಏಕಾಚಿತ್ತವಾಗಿ ಸಂತೋಷದಿಂದ ನೋಡುತ್ತಾ ಅವುಗಳ ಜೊತೆ ವಿಶ್ರಾಂತಿ ಪಡೆದರೆಂಬ ಐತಿಹ್ಯವಿದೆ. ಇದೆ ಕಾರಣಕ್ಕೆ 'ಮೂಗಣ್ಣನ ಗುಡಿ' ಎಂದು ಕರೆಯುತ್ತಾರೆ.

**೭. ಕುರುವಿನ ಕಲ್ಲುಗುಡ್ಡ :**

ಇದು ಮೂಗಣ್ಣನ ಗುಡಿಗೆ ಹತ್ತಿರ್ತದಲ್ಲಿಯೇ ಉತ್ತರ ದಿಕ್ಕಿನ ಕಡೆಗೆ ಇದೆ. ಈ ಗುಡ್ಡದ ಮೇಲೆ ಮರುಳಸಿದ್ಧೇಶ್ವರ (ಕರುವಿನಯ್ಯ) ಒಂದು ಅಂಕಣ ಗುಡಿಯಿದೆ. ಶ್ರೀ ಮರುಳಸಿದ್ಧೇಶ್ವರರು ಇಲ್ಲಿ ದನಗಳನ್ನು ಸುರಕ್ಷಣೆ ಮಾಡಿದರೆಂಬ ಐತಿಹ್ಯವಿದೆ. ಇಂದಿಗೂ ಸಹ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಭಕ್ತರು ಶ್ರೀ ಮರುಳಸಿದ್ಧೇಶ್ವರನ ಪೂಜೆಮಾಡಿ ಗುಡ್ಡದ ಮೇಲಿನ ಎರಡು ಸಣ್ಣ ಕಲ್ಲುಗಳನ್ನು ದನ-ಕರುಗಳೆಂದು ಭಾವಿಸಿ ಮನೆಗೆ ತಂದು ವರ್ಷವೆಲ್ಲಾ ಪೂಜೆ ಮಾಡುತ್ತಾರೆ. ಈ ರೀತಿ ಮಾಡುವುದರಿಂದ ಮನೆಯಲ್ಲಿ ದನ-ಕರುಗಳ ವೃದ್ಧಿಗೆ ಸಂರಕ್ಷಣೆಯಾಗುತ್ತವೆ ಎಂಬ ಭಾವನೆ ಇದೆ.

**೮. ಸ್ವಾಮಿಯ ಪಾದಕಟ್ಟೆಗಳು :**

ಉಜ್ಜನಿ ಮತ್ತು ಸುತ್ತಮುತ್ತಲಿನ ಹತ್ತಿರದ ಹಳ್ಳಿಗಳಲ್ಲಿ ಸ್ವಾಮಿಯ ಒಂಬತ್ತು ಪಾದದ ಕಟ್ಟೆಗಳು ಇರುವುದು ಕಂಡುಬರುತ್ತದೆ. ಶ್ರೀ ಮರುಳಸಿದ್ಧೇಶ್ವರರು ದುಷ್ಟರ ಸಂಹಾರ, ಶಿಷ್ಟರ ರಕ್ಷಣೆಗಾಗಿ ನವ ಖಂಡಗಳನ್ನು ಸಂಚಾರ ಮಾಡಿ ಎಲ್ಲಾ ಕಡೆಗೂ ದಿಗ್ವಿಜಯ ಸಾಧಿಸಿದ ದಿನವೇ ಭಾರತ

ಹುಣ್ಣಿಮೆ ದಿನವೆಂಬ ಐತಿಹ್ಯವಿದೆ. ಇದರ ಕುರುವಾಗಿಯೇ ಧರ್ಮ ರಕ್ಷಣೆಗೋಸ್ಕರ ಶ್ರೀ ಮರುಳಸಿದ್ಧೇಶ್ವರ ಉಜ್ಜಿನಿ ಹಾಗೂ ಸುತ್ತಮುತ್ತಲಿನ ಪ್ರದೇಶದ ಹಳ್ಳಿಗಳಲ್ಲಿ ಒಂಬತ್ತು ಪಾದದ ಕಟ್ಟೆಗಳನ್ನು ನಿರ್ಮಿಸಿದರೆಂಬ ಪ್ರತೀತಿಯಿದೆ. ಇಂದಿಗೂ ಸಹ ಪ್ರತಿವರ್ಷ ಮಾಘ ಶುದ್ಧ ರಥ ಸಪ್ತಮಿ ದಿನದ ರಾತ್ರಿಯಿಂದ ಭಾರತ ಹುಣ್ಣಿಮೆಯ ದಿನದವರೆಗೆ ಒಂಬತ್ತು ಪಾದಕಟ್ಟೆಗಳ ಪ್ರದಕ್ಷಣೆ ಕಾರ್ಯ ಶ್ರೀ ಮರುಳಸಿದ್ಧರ ಪಾಲಿಕೆ ಉತ್ಸವದೊಡನೆ ಭಕ್ತರೊಂದಿಗೆ ನಡೆಯುತ್ತದೆ. ಸ್ವಾಮಿಯ ಒಂಬತ್ತು ಪಾದಕಟ್ಟೆಗಳು ಇರುವ ಊರಿನ ಹೆಸರು ಈ ರೀತಿ ಇವೆ.

೧. ಉಜ್ಜಿನಿ ೨. ಬೆಳದೇರಿ ೩. ಮಾಚೇನಹಳ್ಳಿ ೪. ಬೆನಕನಹಳ್ಳಿ ೫. ಸೊಕ್ಕೆ ೬. ಸಾಸವೆಹಳ್ಳಿ ೭. ಹಾರಕನಾಳು ೮. ಈಚಲಕಟ್ಟೆ ೯. ಭುಜಂಗ ದೇವರಕಟ್ಟೆ

**೩.೨. ಕಥೆ ಮತ್ತು ಲಾವಣಿ :**

ಮೂಲತಃ ಸಾಹಿತ್ಯ ಕಲೆಗಳ ಉದ್ದೇಶ ಮನ ಆನಂದ, ಮನೋವಿಕಾಸ, ಆದಿಮಾನವ, ಬುಡಕಟ್ಟು ಮಾನವ ಮತ್ತು ಗ್ರಾಮ ಮಾನವನೆಂದೂ ತನ್ನ ಕಲೆ ಸಾಹಿತ್ಯಕ್ಕೆ ಪ್ರತಿಫಲ ಬಯಸಿದ್ದಲ್ಲ ಆದರೆ ನಗರ ಮಾನವ ಪ್ರತಿಯೊಂದಕ್ಕೂ ಪ್ರತಿಫಲ ಬಯಸುತ್ತಾನೆ. ಹಿಂದಿನವರು ಕಲೆ ಸಾಹಿತ್ಯ ಅರಾಧನೆಯ ವಸ್ತು ಎಂದು ಬಗೆದಿದ್ದರು. ಆಗಿನ ಸಂದರ್ಭ ಬೇರೆಯಾಗಿತ್ತು. ಆಸೆ–ಆಕಾಂಕ್ಷೆಗಳು, ಸಮಸ್ಯೆ, ಜೀವನೊತ್ತಡಗಳು ಇಂದಿನಷ್ಟು ಇರಲಿಲ್ಲ. ಜೀವನ ದೃಷ್ಟಿಕೋನವೇ ಬೇರೆಯಾಗಿತ್ತು. ಅಲ್ಲದೆ ಆ ಜನರು ದೇವಾಲಯ ಕೋಟೆ–ಕೊತ್ತಲಗಳನ್ನು ಕಟ್ಟಿ ಕಥೆ, ಹಾಡು, ಗಾದೆಗಳನ್ನು ಸೃಷ್ಟಿಸಲು ಸಾಧ್ಯವಾಯಿತು. ಇದು ಇಂದು ಕೂಡ ಜನಪದರ ಬಾಯಲ್ಲಿ ಜೀವಂತವಾಗಿ ಉಳಿದುಕೊಂಡು ಬಂದಿದೆ.

**ಜರಿಮಲೆ ಪಾಳೆಗಾರರು :**

ಪ್ರೌಢ ದೇವರಾಯನ (೧೪೧೭–೧೪೪೬) ತರುವಾಯ ಬಂದ ವಿಜಯನಗರದ ಅರಸರು ದುರ್ಬಲರಾದರು. ರಾಜ್ಯಾಡಳಿತ ಕ್ಷಿಣಿಸಿತು. ಇದರಿಂದ ಸಾಮಂತರು ಸ್ವತಂತ್ರರಾಗುವುದಕ್ಕಾಗಿ ಸಹನೆಗಳಾದರು. ಕೋಟೆ–ಕೊತ್ತಲುಗಳನ್ನು ಕಟ್ಟಿಕೊಂಡು ತುಂಡರಸರಾಗುವುದಕ್ಕೆ ಕಾರಣವಾಯಿತು. ಹಾಗೆ ಪ್ರಭು ಆದವರಲ್ಲಿ ಸಾಳ್ವ ನರಸಿಂಹ. ಇವನು ವಿಜಯನಗರದಲ್ಲಿ ತನ್ನ ವಂಶವನ್ನು ಸ್ಥಾಪಿಸಿದನು. ಈ ವಂಶ ಬಹಳ ಕಾಲ ಮುಂದುವರೆಯಲಿಲ್ಲ. ಸಾಳ್ವ ರಾಜನ ದಂಡನಾಯಕ ತುಳುವಂಶದ ನರಸನಾಯಕ ವಿಜಯನಗರದ ರಾಜನಾದ ಈ ವಂಶದ ೩ನೇ ರಾಜನೇ ಕೃಷ್ಣದೇವರಾಯ. ಈತನ ಕಾಲದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಆಡಳಿತ ಬಿಗಿ ತಪ್ಪಿತ್ತು. ಅಲಲ್ಲಿ ಸಹನೆಗಳಾದವರು ಕೋಟೆಗಳನ್ನು ಕಟ್ಟಿಕೊಂಡು ಪಾಳೆಗಾರರು ಎನಿಸಿಕೊಂಡರು. ಇಂತವರಿಗೆ

ಪ್ರೋತ್ಸಾಹ ಕೊಟ್ಟು ವಿಜಯನಗರದ ಅರಸರೆಂದರೆ ಕೃಷ್ಣದೇವರಾಯ ಮತ್ತು ಅಚ್ಯುತರಾಯ ಇವರು ಅಂಥ ಪಾಳೆಗಾರರನ್ನು ತಮ್ಮ ಸಾಮಾಂತರನ್ನಾಗಿಯೂ, ಸೇನಾ ನಾಯಕರನ್ನಾಗಿಯೂ ಮಾಡಿಕೊಳ್ಳುತ್ತಿದ್ದರು. ತರಿಕೇರಿ, ಐಗೂರು, ಸುಗಟೂರು, ಹೊಳಲ್ಕೆರೆ, ಚಿತ್ರದುರ್ಗ, ಬೇರೂರು, ಮಾಸ್ತಿ, ಮಾಗಡಿ ಮತ್ತು ಕೆಳದಿ ಇವು ಆ ಕಾಲದ ಪಾಳೆಪಟ್ಟಗಳು. ಈ ಪಾಳೆಗಾರರು ಮತ್ತು ಅಧಿರಾಜರಿಗೆ ಕಪ್ಪ ಕಾಣಿಕೆಗಳನ್ನು ಕೊಡುತ್ತಾ ಯುದ್ಧ ಕಾಲದಲ್ಲಿ ಸಹಾಯ ಮಾಡುತ್ತಾ ಸುಮಾರು ೨೫೦ ವರ್ಷ ದೇಶವನ್ನು ಆಳಿದರು. ಇದಲ್ಲದೇ ಕೆಲವು ಮಹಾದಾರ್ಶನಿಕರ ಅನುಗ್ರಹದಿಂದ ಈ ಪಾಳೆಗಾರರು ಪಾಳೆಪಟ್ಟಗಳನ್ನು ಕಟ್ಟಿಕೊಂಡು ರಾಜ್ಯಭಾರ ನಡೆಸಿದುದು ಕಂಡುಬರುತ್ತದೆ.

ಉದಾ: ಚಿತ್ರದುರ್ಗ, ಹರಪನಹಳ್ಳಿ, ಜಿರಮಲೆ ಮುಂತಾದವು.

ಚಿತ್ರದುರ್ಗದ ಭರಮಣ್ಣ ನಾಯಕ ಸಿಂಹಾಸನರೋಹಣಕ್ಕೆ ಚಿತ್ರದುರ್ಗದ ಮುರುಘಮಠದ ಸ್ವಾಮಿಗಳು ಕಾರಣಾದರೆ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಜರಿಮಲೆ ಪಾಳೆಪಟ್ಟದ ನಿರ್ಮಾಣಕ್ಕೆ ಉಜ್ಜನಿ ಸಿಂಹಾಸನಾಧೀಶ್ವರ ಮರುಳಸಿದ್ಧಯ್ಯನವರೇ ಕಾರಣಿಭೂತರು. ಇದಕ್ಕೆ ಸಂಬಂಧಪಟ್ಟ ಕತೆಯನ್ನು ಕೆಳಗಿನಂತೆ ನೋಡಬಹುದು.

**ಕತೆ :**

ಜರಿಮಲೆ ಭೋಪರು ಮೊದಲು ಕಂಚಿದೇಶದ ನಿವಾಸಿಗಳು (ಪಲ್ಲವರ ರಾಜಧಾನಿ) ಸುಮಾರು ೬೦೦-೭೦೦ ವರ್ಷಗಳ ಹಿಂದೆ ಉತ್ತರದ ಕಡೆಗೆ ಹೊರಟರು. ಮುಂದಿನ ರಾಜ್ಯವೇ ಮೈಸೂರು ಮಾರ್ಗದಲ್ಲಿ ಅವರಿಗೆ ಇದ್ದಕ್ಕಿಂತೆ ಆಕಳು ಕಾಣಿಸಿಕೊಂಡು ಮಾಯವಾಯ್ತು. ಆಕಳಿನ ಹೆಜ್ಜೆಯನ್ನು ಅನುಸರಿಸಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಗಂಗಮ್ಮನಹಳ್ಳಿ ದೋಣಿಗುಡ್ಡದವರೆಗೂ ಬಂದರು. ಆ ಗುಡ್ಡವನ್ನು ಹತ್ತಿ ನೋಡಿದರೆ ಸುತ್ತಾ ಹಾಸಿನ ಮರಗಳು (ಮರಗಳ ಜಾತಿ) ಕಾನನ ಕಂಗೊಳಿಸುತ್ತಿತ್ತು. ಅಲ್ಲಿಂದ ಶಂಖ, ಜಾಗಟೆ, ನಿನಾದ ಕೇಳಿಬರುತ್ತಿತ್ತು. ಆ ನಾದವನ್ನು ಅನುಸರಿಸಿ ಈ ಜರಿಮಲೆ ಭೂಪರು ಹೋಗಿ ನೋಡಿದರು. ಅಲ್ಲಿ ಮಹಾಯೋಗಿವಾರೆಣ್ಯರ ಶಿಬಿರ ಕಾಣಿಸಿತು. ಒಳಗಡೆ ಸ್ವಾಮಿಗಳು ಶಿವಪೂಜೆ ಮಾಡುತ್ತಿದ್ದರು. ಜರಮಲೆ ಭೂಪರು ಹೊರಗಡೆ ಸ್ವಾಮಿಗಳ ಆಜ್ಞೆಗಾಗಿ ಕಾದು ನಿಂತರು. ಪೂಜಾ ನಂತರ ಸ್ವಾಮಿಗಳ ದರ್ಶನವಾಯಿತು. ಗುರುಗಳೊಂದಿಗೆ ಸಂಭಾಷಿಸುತ್ತಿರುವಾಗ ಪಕ್ಕದಲ್ಲಿ ನಿಂತ ಸುರಭಿ ಎಂಬ ಆಕಳು ಕೆಚ್ಚಲಿನಿಂದ ಹಾಲು ತನ್ನಷ್ಟಕ್ಕೆ ತಾನೆ ಸುರಿಯಲಾರಂಭಿಸಿತು. ಇದರಿಂದ ಆ ಸ್ಥಳಕ್ಕೆ ಸುರಭಿ ಚಿರಭಿ ಎಂದು ಅಭಿದಾನವಾಯಿತು. ಇಂದು ಕೂಡ ಈ ಗ್ರಾಮ ಕೂಡ್ಲಿಗಿ ತಾಲೂಕಿನಲ್ಲಿದೆ.

ಸ್ವಾಮಿಗಳ ಆದೇಶದ ಮೇರೆಗೆ ಆ ಏಳುಮಂದಿ ವೀರರು ಚಳ್ಳಕೇರಿ ತಾಲೂಕಿನ ಗ್ರಾಮವಾದ ಮಲೆ ಭೂಪ ಸಮುದ್ರಕ್ಕೆ ಬಂದು ಅಲ್ಲಿಯೇ ನೆಲೆಸಿದರು. ಆ ಗ್ರಾಮದ ಕಾಡಿನಲ್ಲಿ ಬಿಳಿ ಹಂದಿ ದಾರಿ ಹೋಕರಿಗೆ ತುಂಬಾ ಉಪದ್ರವ (ಕಷ್ಟ) ಕೊಡುತ್ತಿತ್ತು. ಬೇಸತ್ತ ಜನ ಆ ಊರಿನ ಮುಖಂಡನಾದ ಭೈರಪ್ಪನಿಗೆ ಮೊರೆಯಿಟ್ಟರು. ಭೈರಪ್ಪ ಅಂಥ ಪ್ರಚಂಡ ಹಂದಿಯನ್ನು ಎದುರಿಸಲು ಕಂಚಿ ದೇಶದ ವೀರರೇ ಸಮರ್ಥರೆಂದು ಸೂಚಿಸಿದ. ಊರ ಪ್ರಮುಖರೆಲ್ಲ ಸೇರಿ ಆ ವೀರರಲ್ಲಿ ಅರಿಕೆ ಮಾಡಿಕೊಂಡರು. ಶಿವತತ್ವ ಬೋಧನಾರ್ಥವಾಗಿ ಪ್ರವಾಸದಲ್ಲಿ ಮರುಳಸಿದ್ಧಯ್ಯರನ್ನು ಪುನಃ ಸಂದರ್ಶಿಸಿ ಅವರ ಆಶೀರ್ವಾದ ಪಡೆದರು. ಗುರುವರೆಣ್ಯರು ಅಪ್ಪಣೆಕೊಡಸಿದಂತೆ ೭ ಮಂದಿ ವೀರರು ಬೇಟೆಗೆ ಹೊರಟರು. ಆ ಏಳುಮಂದಿ ಪಾಳೇಗಾರರ ಹೆಸರುಗಳು ಹೀಗಿವೆ. ೧. ಸಿದ್ಧಪ್ಪ ನಾಯಕ ೨. ಲಿಂಗಳ ನಾಯಕ ೩. ಒಬಳ ನಾಯಕ ೪. ಮಲ್ಲಿಕಾರ್ಜುನ ನಾಯಕ ೫,೬,೭ನೆಯ ನಾಯಕರ ಹೆಸರು ತಿಳಿದುಬಂದಿಲ್ಲ.

ಮಲೆಭೂಪ ಸಮುದ್ರದಿಂದ ಈ ಏಳುಮಂದಿ ನಾಯಕರು ಏಳು ನಾಯಿಗಳೊಂದಿಗೆ ಶ್ವೇತ ವರಹವನ್ನು (ಬಿಳಿಹಂದಿ) ಬೆನ್ನಟ್ಟಿ ಹೊರಟರು. ಬಳ್ಳಾರಿ ಜಿಲ್ಲೆ ಸಂಡೂರು ತಾಲೂಕಿನ ಕೆರೆನಹಳ್ಳಿ (ಚಿಕ್ಕ ಕೆರೆನಹಳ್ಳಿ) ಎನ್ನುವ ಗ್ರಾಮದವರೆಗೆ ಆ ಬಿಳಿಹಂದಿ ಓಡಿ ಬಂದಿತು. ಅಲ್ಲೊಂದು ಗುಡ್ಡದ ಪಕ್ಕದಲ್ಲಿ ಒಂದು ಹಳ್ಳ. ಆ ಹಳ್ಳದಲ್ಲಿ ಹಂದಿ ಸ್ನಾನಮಾಡಿ ಬಂದು ಗುಂಡಿನ ಪಕ್ಕ ಮಲಗಿತ್ತು. ಏಳುಮಂದಿ ನಾಯಕರ ಪೈಕಿ ಭೂಮರಾಜ ಎಂಬುವನು ಆ ಹಂದಿಗೆ ಭರ್ಚಿ ಹಾಕಿದ. ಹಂದಿ ಸಿಂಹಗರ್ಜನೆ ಮಾಡಿತು. ಪಕ್ಕದಲ್ಲಿದ್ದ ಗುಂಡು ಆ ಭಯಂಕರ ಗರ್ಜನೆಗೆ ಸಿಡಿದು ಹೋಯಿತು. ಇಂದಿಗೂ ಆ ಗುಂಡನ್ನು ಹಂದಿ ಹೊಡೆದ ಕಲ್ಲು ಎಂದು ಕರೆಯುತ್ತಾರೆ. ಆ ಹಂದಿ ಅಲ್ಲಿಂದ ನೆಗೆದು ಕೂಡ್ಲಿಗಿ ತಾಲೂಕಿನ ಉಜ್ಜನಿ ಎಂಬ ಗ್ರಾಮದೆಡೆಗೆ ಓಡುತ್ತಿತ್ತು. ನಾಯಕರು ಅದನ್ನು ಹಿಂಬಾಲಿಸಿ ಹೋದರು. ಬೇಟೆಯಾಟದಲ್ಲಿ ಅವರು ಬಸವಳಿದರು (ರೋಸಿದರು) ಹೆಚ್ಚು ನೀರಡಿಕೆಯಾಯಿತು. ಈಗಿನ ಉಜ್ಜನಿಯ ದೇವಾಲಯದ ಸ್ಥಳದಲ್ಲಿ ಆಗ ಭಾರಿ ಪೊದೆ ಬೆಳೆದಿತ್ತು. ಹಂದಿ ಆ ಪೊದೆಯಲ್ಲಿ ಹೊಕ್ಕು ಬಯಲಾಯಿತು. ಬಸವಳಿದ ನಾಯಕರು ಅಲ್ಲಿಯೇ ನೆರಳಿನಲ್ಲಿ ತಂಗಿದರು.

ಇದ್ದಕ್ಕಿದ್ದಂತೆಯೇ ಪೊದೆಯಲ್ಲಿ ನಾಯಿ ಮೈಯಲ್ಲಾ ರಾಡಿ ಮಾಡಿಕೊಂಡು ಹೊರಬರುವುದು ಭೂಮರಾಜನಿಗೆ ಕಂಡಿತು. ಓ ಆ ಪೊದೆಯಲ್ಲಿ ನೀರು ಇರಬಹುದೆಂದು ಊಹಿಸಿ ಬೆಳೆದ ಪೊದೆಯನ್ನು ಕಡಿದು ಒಳಹೊಕ್ಕ. ಅಲ್ಲಿ ಜಲದ ಸ್ಥಾನ ಕಂಡಿತು. ಮೊದಲೇ ನೀರಡಿಕೆಯಿಂದ ಬಳಲಿದ ಭೂಮರಾಜ ಸಂತೋಷದಿಂದ ಅಲ್ಲಿದ್ದ ನೀರನ್ನು ಭೊಗಸೆ ಕೈಗಳಿಂದ ಗಟಗಟನೆ

ಕುಡಿದು ತಲೆಎತ್ತಿ ನೋಡುತ್ತಾನೆ ಎದುರಿಗೆ ವಟವೃಕ್ಷದ ಟೊಂಗೆಯಲ್ಲಿ ತೊಟ್ಟಿಲೊಂದು ನೇತಾಡುವುದು. ಆ ತೊಟ್ಟಿಲಿನಲ್ಲಿ ತೇಜಸ್ವಿಯಾದ ಮಹಾಸ್ವಾಮಿಗಳು ಕೈಯಲ್ಲಿ ಮಾವಿನ ಹಣ್ಣನ್ನು ತಿನ್ನುತ್ತಿದ್ದರು. ಹಣ್ಣು ಪೂರ್ತಿಯಾಗಿ ಕೈಯಲ್ಲಿ ಗೊಟ್ಟ ಮಾತ್ರ ಉಳಿದಿತ್ತು. ಭೂಮರಾಜ ಆ ದಿವ್ಯ ಪುರುಷನಿಗೆ ದೀರ್ಘದಂಡ ನಮಸ್ಕಾರ ಮಾಡಿದ. ಗುರುಗಳು ಕೈಯಲ್ಲಿದ್ದ ಆ ಮಾವಿನ ಗೊಟ್ಟವನ್ನು ರಾಜನ ಸೆರಗಿನಲ್ಲಿಟ್ಟು 'ರಾಜನಾಗು' ಎಂದು ಆಶೀರ್ವಾದಿಸಿದರು. ಅಂದು ಗುರುಗಳು ಆಶೀರ್ವಾದಿಸಿ ಕೊಟ್ಟ ಮಾವಿನ ಗೊಟ್ಟಕ್ಕೆ ಬಂಗಾರದ ಕವಚ ಹಾಕಿ, ಹಾಗೆಯೇ ಇರಿಸಿಕೊಂಡು ಬಂದಿದ್ದಾರೆ, ಇದನ್ನು ಜರಮಲೆಯ ಪಾಳೇಗಾರರ ಮನೆಯಲ್ಲಿ ಈಗಲೂ ನೋಡಬಹುದು. ಈ ಊರು ಕೂಡ್ಲಿಗಿ ತಾಲೂಕಿನಲ್ಲಿದೆ.

**ಮರುಳಸಿದ್ಧನ ಕಥೆ :**

ಕೋಗು ಮಾರೆಣ್ಣ ಮತ್ತು ಅವನ ಹೆಂಡತಿ ಕನಕವ್ವ ಇರುತ್ತಾರೆ. ಇವರ ಮಗ ಹರಳಯ್ಯ. ಹರಳಯ್ಯ ಹುಟ್ಟಿದ ಮೇಲೆ ಕೋಗು ಮಾರೆಣ್ಣ ದಂಪತಿಗಳು ಸ್ವರ್ಗಸ್ತರಾದರು. ಮುಂದೆ ಹರಳಯ್ಯನನ್ನು ಆಲೂರಿನ ಜನರೇ ಸಲುವಿದರು. ಹರಳಯ್ಯ ಮಂದಿಯ ಕೈಯಲ್ಲಿ ಬೆಳೆಯುತ್ತಾ ದೊಡ್ಡವನಾಗಿ 'ಕಟ್ಟಿಗೆ' ಮಾರುತ್ತಾ ತನ್ನ ಜೀವನವನ್ನು ನಡೆಸುತ್ತಿದ್ದನು.

ಈ ರೀತಿಯಾಗಿ ಜೀವನ ಮಾಡುತ್ತಿರಲು ಇದೇ ಉಜ್ಜಿನಿ ಪಟ್ಟಣದ ಒಬ್ಬ ಬ್ರಾಹ್ಮಣರ ಮಗಳು ಮೈನೆರೆದು ಹತ್ತು ಹನ್ನೆರಡು ವರ್ಷಗಳಾದರೂ ಯಾವುದೇ ವರ ಬಂದಿರಲಿಲ್ಲ. ಇದರಿಂದ ಬೇಸತ್ತ ಬ್ರಾಹ್ಮಣ ತನ್ನ ಆಳು ಮಕ್ಕಳನ್ನು ಕರೆದು ಮಗಳ ಕಣ್ಣಿಗೆ ಬಟ್ಟೆಯನ್ನು ಕಟ್ಟಿ ಅಡವಿಗೆ ಬಿಟ್ಟು ಬರುವಂತೆ ಹೇಳುತ್ತಾನೆ. ಅವರು ಕರೆದುಕೊಂಡು ಹೋಗಿ ಒಂದು 'ಕೋಟಾ' ವೃಕ್ಷದಂತಹ ಆಲದ ಮರ, ಅದರ ಅಡಿಗೆ ಬಾವಿ, ಆ ಮರದ ಕೆಳಗೆ ನೆಲವನ್ನು ತುಂಬಿಕೊಂಡಿದ್ದ ಎಲೆಗಳು ಇಂಥಾ ಜಾಗಕ್ಕೆ ಕರೆತಂದು ಬಿಡುತ್ತಾರೆ.

ಇತ್ತ ಬ್ರಾಹ್ಮಣನ ಮಗಳು ಶೋಕಿಸುತ್ತಾ ಕುಂತಿದ್ದಳು. ಹರಳಯ್ಯನು ಪ್ರತಿದಿನದಂತೆ ಕಟ್ಟಿಗೆಗಾಗಿ ಅದೇ ಅಡಿವಿಗೆ ಬಂದನು. ಅಂದು ಅವನಿಗೆ ಬೇಗನೆ ಕಟ್ಟಿಗೆ ಸಿಗಲಿಲ್ಲ. ಮುಂದೆ ಹೋದೇ ಹೋದನು ಹೆಣ್ಣಿನ ರೋದನೆ ಇವನಿಗೆ ಕೇಳಿಸಿತು. ಇಷ್ಟು ದಿನವಾದರೂ ಈ ಅಡವಿಯಲ್ಲಿ ಹೆಚ್ಚಿನ ಅಳುವು ಕೇಳಿಲ್ಲ. ಇದು ಯಾರಿರಬಹುದು ಎಂದು ಹರಳಯ್ಯ ಆ ಕಡೆ ನಡೆದ ಅಲ್ಲಿ ಹೆಣ್ಣನ್ನು ಕಂಡು ಯಾರಮ್ಮ ನೀನು? ಎಂದು ಕೇಳಿದ. ನಾನು ಯಾರಂತ ಕೇಳುತ್ತಿಯಲ್ಲಪ್ಪ ನಾನು ಉಜ್ಜಿನಿ ಗ್ರಾಮದ ಬ್ರಾಹ್ಮಣನ ಮಗಳು. ನಮ್ಮಪ್ಪ ಕಣ್ಣು ಕಟ್ಟಿ ಈ ಅಡಿವ್ಯಾಗ ಬಿಟ್ಟು ಹೋಗ್ಯಾನ. ನನ್ನ ಹೆಸರು ಕಲ್ಯಾಣವ್ವ ಎಂದು ಹೇಳಿದಳು. ಹರಳಯ್ಯ ಕೇಳುತ್ತಿರುವಾಗಲೇ

ನೋಡಪ್ಪಾ ನಾನು ನಿನ್ನ ಹೆಂಡತಿ ನೀನೇ ನನ್ನ ಗಂಡ ಎಂದಳು. ಅದಕ್ಕೊಪ್ಪಿಕೊಂಡ ಇವರಿಬ್ಬರು ಉಜ್ಜನಿ ಎಂಬ ಪಟ್ಟಣಕ್ಕೆ ಬಂದರು.

ಇಲ್ಲಿಯ ತನಕ ಹರಳಯ್ಯನದು ಒಂದೇ ಹೊಟ್ಟೆಯಿತ್ತು. ಈಗ ಎರಡು ದೇಹಗಳಾದವು. ಸಂಪಾದನೆ ಸಾಕಾಗಲಿಲ್ಲ. ಇವರು ಉಜ್ಜನಿಗೆ ಬಂದ ಮೇಲೆ ಕೊಟ್ಟೂರು ರಸ್ತೆಯಲ್ಲಿ ಒಂದು ಜೋಪಡಿಯನ್ನು ಹಾಕಿಕೊಂಡು ಜೀವನ ನಡೆಸುತ್ತಾರೆ. ಸಂಸಾರದ ತಾಪತ್ರಯ ಕಂಡು ಹರಳಯ್ಯನ ಹೆಂಡತಿ ಕಲ್ಯಾಣವ್ವ ಗಂಡನಿಗೆ ಏನ್ರಿ ನೀವು ಒಂದು ಹೊರೆ ಕಟ್ಟಿಗೆ ತಂದದ್ದು ಯಾರಿಗೆ ಸಾಲುತ್ತೇ ನಾನು ಬರುತ್ತೇನೆ. ಇಬ್ಬರೂ ಕಟ್ಟಿಗೆ ತರೋಣ ಎನ್ನುತ್ತಾಳೆ. ಆದರೆ ಹರಳಯ್ಯ ಏನೂ ಬ್ಯಾಡ ನಾನೇ ಎರಡು ಬಾರಿ ಕಟ್ಟಿಗೆ ತರುತ್ತೇನೆ. ಅದರಲ್ಲಿ ಒಂದು ಹೊರೆ ಉಪ್ಪು ಮೇನಸಿಕಾಯಿಗೆ ಇನ್ನೊಂದು ಹೊರೆ ಕೂಳು ನೀರಿಗೆ ಎಂದು ಲೆಕ್ಕ ಹಾಕಿದ. ಇದನ್ನು ಕೇಳಿದ ಕಲ್ಯಾಣವ್ವ "ನೋಡ್ರಿ ಈ ರೀತಿ ಅಡವಿಗೆ ಹೋಗಿ ಕಟ್ಟಿಗೆ ತರುವುದು ಸರಿಯಲ್ಲ. ನೀವು ಯಾರ ಬಳಿಗಾದರೂ ಹೋಗಿ ನಾಲ್ಕು ವರಹ ಸಾಲವನ್ನು ತಂದು ಅದರಿಂದ ಚರ್ಮ ಹದಮಾಡಿ ಪಾದರಕ್ಷೆ ಮಾಡೋಣ" ಎಂದಳು. ಅದಕ್ಕೆ ಹರಳಯ್ಯ ಕಗ್ಗಲ್ಲು ಗೌಡನ ಮನೆಗೆ ಸಾಲಕ್ಕೆ ಹೋದನು. ಹೋಗುವಾಗ ಒಂದು ಹರಕು ಕಂಬಳಿ ತೆಗೆದುಕೊಂಡು ಹೋಗಿ ಆ ಗೌಡನ ಮನೆ ಮುಂದೆ ಕಂಬಳಿಯನ್ನು ಮುಖಳಿ ಅಡ್ಯಾಕ ಹಾಕಿಕೊಂಡು ಮುಂಜಾನೆಯಿಂದ ಸಂಜಿ ತನಕ ಕುಂತು ಗೌಡ ಮನೆಯಾಗ ಕೈಗೆ, ಮೈಗೆ ವಿಭೂತಿ, ದನಕರುಗಳಿಗೆ ವಿಭೂತಿ, ಅದರಂತೆ ಮನೆಯ ನೂರಾವಂದು ಲಿಂಗಕ್ಕೆ ಪೂಜೆ ಮಾಡಿಕೊಂಡು ಹೊರಗಡೆ ಬಂದನು. ಬಂದು ಏನಪ್ಪಾ ಹರಳಯ್ಯ ಯಾಕ್ ಹಿಂಗ್ ಬಂದು ಮನೆಮುಂದೆ ಕುಂತಿಯಲ್ಲ ಎಂದ. ಅದಕ್ಕೆ ಹರಳಯ್ಯ ಏನಿಲ್ಲ ಗೌಡ್ರೆ ನಿಮ್ಮತ್ರ ಸಾಲ ಕೇಳಕ್ ಬಂದೀನಿ ಎಂಬ. ಅದಕ್ಕೆ ಗೌಡ ಏಟು ಕೊಡಬೇಕಲೇ ಅಂದ್ರು. ಎಷ್ಟು ಇಲ್ರೀ ನಾಲ್ಕು ವರಹ ಸಾಕು. ಈ ಸಾಲವನ್ನು ನನ್ನ ಮಕ್ಕಳು ಕೊಡತಾರೆ ನಿನ್ನ ಮಕ್ಕಳು ಪಡಕಬೇಕು ಎಂದು ಹೇಳಿದ ಹರಳಯ್ಯ. ಅದಕ್ಕೆ ಗೌಡ ಒಪ್ಪಿಕೊಂಡು ನಾಲ್ಕು ವರಹ ಸಾಲ ಕೊಟ್ಟು ಕಳುಯಿಸಿದನು.

ನಾಲ್ಕು ವರಹ ಸಾಲ ತಂದ ಹರಳಯ್ಯ ಅದರಿಂದ ಚರ್ಮವನ್ನು ತಂದು ತಂಗಡಗೆ ಕಟ್ಟಿಗೆ ತಂದು ಅದನ್ನು ಬಿಗಿದು ಹರಿಮಾಡಿ ಪಾದರಕ್ಷೆ ಮಾಡಲು ಕುಳಿತ. ಹರಳಯ್ಯ ಹದ ಮಾಡಿ ಕೊಟ್ಟಾಂಗೆಲ್ಲಾ ಕಲ್ಯಾಣವ್ವ ಹೊಲಿದು ಹೊಲಿದು ಹಾಕಿದಳು. ಅದರಾಗ ಲಕ್ಷಾನುಲಕ್ಷ ಪಾದರಕ್ಷೆ ಆದವು. ಅಂತಹ ಸಮಯದಲ್ಲಿ ಉಜ್ಜನಿ ಹಾಗೂ ಕಾಶಿಪುರಕ್ಕೆ ಹೋಗುವ ಜನರೆಲ್ಲ ಹರಳಯ್ಯನ ಪಾದರಕ್ಷೆಯನ್ನು ನನಗೆ ನಿನಗೆ ಎಂದು ಎಲ್ಲವನ್ನೂ ಪಡೆದುಕೊಂಡು ಹೋದರು. ಅನಂತರ

ಒಬ್ಬ ಬಡವನು ಬಂದ ಅವನಿಗೆ ಕಾಲಿನ ತುಂಬೆಲ್ಲಾ ಬೊಬ್ಬೆಯಿದ್ದವು. ಅವನು ಹರಳಯ್ಯನನ್ನು ಒಂದು ಜತೆ ಚಪ್ಪಲಿಯಿದ್ದರೆ ಕೊಡಪ್ಪಾ ಎಂದು ಕೇಳಿದನು. ಹರಳಯ್ಯನು ಅವನಿಗೂ ಚಪ್ಪಲಿ ಕೊಟ್ಟ, ಎಲ್ಲಾ ಚಪ್ಪಲಿಯನ್ನು ಬರಿದು ಮಾಡಿಕೊಂಡು ನಿಶ್ಚಿಂತನಾದ. ಆ ಬಡವನು ಕಾಶಿಪುರಕ್ಕೆ ಹೋಗುವುದಾಗಿ ಹೇಳಿದ. ಈ ವಿಷಯ ಕೇಳಿದ ಹರಳಯ್ಯ ತನ್ನಲ್ಲಿದ್ದ ಮುಡಿಕಾಸನ್ನು ಆ ಬಡವನ ಕೈಯಲ್ಲಿ ನೀಡಿ ಕಾಶಿಪುರದ ಸ್ವಾಮಿಗಳಿಗೆ ಕೊಡು ಎಂದು ಹೇಳಿದನು. ಕಾಶಿಪುರಕ್ಕೆ ಹೋದಂತ ಅನೇಕ ಶ್ರೀಮಂತರು ಗಂಟು ಗಂಟು ಹಾರವನ್ನು ಸ್ವಾಮಿಗಳಿಗೆ ಕೊಡಲು ಹೋದರು. ಸ್ವಾಮಿಗಳು ಅದನ್ನು ಮುಟ್ಟಲಿಲ್ಲ. ಏಕೆಂದರೆ ಹರಳಯ್ಯನ ಹಣ ಮುಟ್ಟಿದ ಮೇಲೆಯೇ ಉಳಿದ ಎಲ್ಲರ ಭಕ್ತಿಯ ಕಾಣಿಕೆಯನ್ನು ಪಡೆದುಕೊಳ್ಳುತ್ತಿದ್ದರು. ಕಾಶಿಪುರದ ಎಂಟೇಂಟು ದಿನ ಜಾತ್ರೆ ಮಾಡುವ ಜನಕ್ಕೆ ಚಪ್ಪಲಿಯನ್ನು ಕೊಟ್ಟು ಖಾಲಿಯಾಗಿ ಕುಂತಿದ್ದ. ಅಂದು ಸಾಕ್ಷಾತ್ ಪರಶಿವನೇ ಕ್ವಾರಣ್ಯ ಭಿಕ್ಷೆಯಿಂದ ಹರಳಯ್ಯನ ಮನೆ ಬಾಗಿಲಿಗೆ ಬಂದನು. ಶಿವನನ್ನು ನೋಡಿ ಕಲ್ಯಾಣವ್ವ ಮುಕ್ಕ ಮಡಿಕೆಯಲ್ಲಿ ನೀರು ತಂದು ಕಾಲಿಗೆ ಹಾಕಿ ನಮಸ್ಕರಿಸಿ, ಮುಕ್ಕ ಸ್ವಾರ್‍ಯಾಗ ಮೂರು ಕಾಳೂ ಇಲ್ಲ. ನಿಮಗೆ ಇನ್ನೇನು ದಾನ ನೀಡಲಿ ಎಂದು ಹಲುಬಿದಳು. ಅದಕ್ಕೆ ಪರಶಿವ ನಾನು ಭಿಕ್ಷೆಗೆ ಬಂದಿಲ್ಲ, ನನಗೆ ನೀನು ಮಾಡಿರುವಂತಹ ಒಂದು ಜೊತೆ ಚಪ್ಪಲಿಬೇಕು ಎಂದು ಕೇಳಿದ. ಶಿವಭಕ್ತ ಹರಳಯ್ಯ ಧರ್ಮ ಸಂಕಟಕ್ಕೆ ಸಿಕ್ಕಿಕೊಂಡು ದಿಕ್ಕು ತೋಚದೆ ತನ್ನ ಹೆಂಡತಿಯ ಬಲತೊಡೆಯ ಚರ್ಮ ಮತ್ತು ತನ್ನ ತೊಡೆಯ ಚರ್ಮವನ್ನು ತೆಗೆದು ಹದಮಾಡಿ ಶಿವನಿಗೆ ಪಾದರಕ್ಷೆ ಮಾಡ್ತಿನಿ ಸ್ವಾಮಿ ಎಂದು ಹೇಳಿ ಅದರಂತೆ ಪಾದರಕ್ಷೆಗಳನ್ನು ಮಾಡಿದನು.

ಇತ್ತ ಬ್ರಾಹ್ಮಣ ಅದೇ ಸಮಯಕ್ಕೆ ತಂಬಿಗೆ ತೆಗೆದುಕೊಂಡು ಹೊರಗಡೆ ಹೋಗಲು ಬಂದ ಹರಳಯ್ಯ ಮಾಡಿದ ಚಪ್ಪಲಿಗಳು ಅದೂ ತೊಡೆಯ ಚರ್ಮದಿಂದ ಮಾಡಿದಂತಹವು ಇವು ಒಂದು ಮೈಲುದೂರ ಪಳಪಳ ಹೊಳೆಯುತ್ತಿದ್ದವು. ಇದನ್ನೂ ಕಂಡ ಬ್ರಾಹ್ಮಣ ನನಗೆ ಈ ಚಪ್ಪಲಿಗಳು ಕೊಡಲೇಬೇಕೆಂದು ಕೇಳಿದ ಅದಕ್ಕೆ ಹರಳಯ್ಯ ಅಯ್ಯನವರೇ ಈ ಪಾದರಕ್ಷೆಗಳು ತಾವು ತೊಡೋವಲ್ರೀ, ಶಿವ ಆ ಪರಮಾತ್ಮ ತೊಡುವಂತವ್ರೀ ಎಂದ. ಬ್ರಾಹ್ಮಣ ಅದೇನೂ ಆಗೋದಿಲ್ಲ ನನಗೆ ಕೊಡು ಎಂದು ಆ ಪಾದರಕ್ಷೆಯ ಮೇಲೆ ಕಾಲಿಟ್ಟ ಇಟ್ಟದ್ದೇ ತಡ ಮೈಯೆಲ್ಲಾ ಉರಿದಿತ್ತು. ಮನೆಗೆ ಹೋಗಿ ಬಿದ್ದ. ಊರವರೆಲ್ಲರೂ ನೀರು ಸುರಿದರೂ ಆ ಬ್ರಾಹ್ಮಣನ ಉರಿಯು ಸಂಕಟ ಮಾತ್ರ ಕಡಿಮೆ ಆಗಲಿಲ್ಲ.

ಆ ಬ್ರಾಹ್ಮಣನ ಇನ್ನೊಬ್ಬ ಮಗಳು ಅಂದು ಊರಿಗೆ ಬಂದಿದ್ದ ಡೊಂಬರ ನಾಟಕವನ್ನು ನೋಡುತ್ತಾ ನೀರನ್ನು ತರುವುದು ಮರೆತು ಬಿಟ್ಟಿದ್ದಳು. ಆಗ ಕತ್ತಲಾಗಿತ್ತು. ಬಾವಿಗೆ ಹೋಗಲು

ದಾರಿ ಕಾಣದೇ ಅವಳು ಮಾದಿಗರ ಕೇರಿಗೆ ಬಂದು ಅಲ್ಲಿದ್ದ ಕೇರಿಯ ಗಲ್ಲಿ ನೀರು ತಂದು ಅವರಪ್ಪನ ಮೇಲೆ ಸುರಿಯುತ್ತಾಳೆ. ಆ ನೀರಿನಿಂದ ಅವನ ಸಂಕಟ, ಉರಿಯು ಕಡಿಮೆಯಾಗುತ್ತದೆ. ಆಗ ಬ್ರಾಹ್ಮಣ ಎದ್ದು ಕುಂತು ಯವ್ವಾ ಮಗಳೇ ಈ ನೀರನ್ನು ನೀನು ಎಲ್ಲಿ ತಂದೆ ಎಂದು ಕೇಳಿದ. ಯಪ್ಪಾ ನಾಟಕ ನೋಡ್ತಾ ನೀರು ತರೋದೇ ಮರ್ತಿದ್ದೆ ಕತ್ತಲಾಗ ದಾರಿ ಕಾಣದೇ ಮಾದರ ಕೇರ್‍ಯಾಗಿನ ಗಲ್ಲೆ ನೀರನ್ನೇ ತಂದು ನಿನ್ನ ಮ್ಯಾಲ ಸುರಿದೆ ಎಂದು ಹೇಳಿದಳು. ಬ್ರಾಹ್ಮಣ ನೀರನ್ನು ಕೊಂಡಾಡುತ್ತಾ ಆರಮಾಗಿ ಮಲಗಿದನು. ಇತ್ತ ಹನ್ನೆರಡು ಗಂಟೆಗೆ ಬರಬೇಕಿದ್ದ ಪರಶಿವನು ಒಂದು ಕೈಗೆ ಜೋಳಿಗೆ ಧರಿಸಿಕೊಂಡು ಹರಳಯ್ಯನ ಜೋಪಡಿ ಕಡೆ ಬಂದು ಶಿವಶಿವ ಕ್ವಾರಣ್ಯ ಭಿಕ್ಷೆ ಎಂದು ನಿಂತುಕೊಂಡ. ಹರಳಯ್ಯ ಶಿವನನ್ನು ನೋಡಿ ತಾನು ಮಾಡಿಟ್ಟ ಪಾದರಕ್ಷೆಗಳನ್ನು ತಂದು ಶಿವನ ಮುಂದಿಟ್ಟು ನಮಸ್ಕರಿಸಿದ. ಮಗೆ ಏನೂ ಬೇಡ, ಸಂಜೇಲಿ ಹುಟ್ಟಿ, ಮುಂಜಾನೆ ಸಾಯೋ ಮಕ್ಕಳ ಫಲಕೊಡು ಎಂದು ಕಲ್ಯಾಣವ್ವ ಬೇಡಿದಳು. ಅದಕ್ಕೆ ಶಿವ ತನ್ನ ಜೋಳಿಗೆಯಿಂದ ಒಂದು ಹಣ್ಣನ್ನು ಕೊಟ್ಟು ಮನೆ ಬಳದುಕೊಂಡು ಮೈ-ಕೈ ತೊಳೆದುಕೊಂಡು ಶುದ್ಧವಾಗಿರಿ. ಗಂಡ-ಹೆಂಡತಿ ಕೊಡುವಾಗ ಈ ಹಣ್ಣನ್ನು ಸೇವಿಸಿರಿ. ಆನಂತರ ಗಂಡು ಮಗುವನ್ನು ಪಡೆಯುತ್ತೀರಿ. ಈ ಮಗುವನ್ನು ಪಡೆದುಕೊಂಡ ಮೇಲೆ ನೀವಿಬ್ಬರೂ ಮರಣ ಹೊಂದುತ್ತೀರಿ ಎಂದು ಹೇಳಿ ಶಿವ ಮಾಯವಾದನು.

**ಮರುಳಸಿದ್ಧನ ಜನನ :**

ಶಿವ ಕೊಟ್ಟ ವರದಂತೆ ಕಲ್ಯಾಣವ್ವ-ಹರಳಯ್ಯನವರಿಗೆ ಗಂಡುಮಗು ಆಯಿತು. ಈ ಮಗು ಹುಟ್ಟಿದ ಮೂರು ದಿವಸಕ್ಕೆ ಕೂಸನ್ನು ನಡುವೆ ಹಾಕಿಕೊಂಡು ಜೋಪಡಿಯಲ್ಲಿ ಇಬ್ಬರು ಪ್ರಾಣ ಬಿಟ್ಟರು. ಇತ್ತ ಕಾಶಿಪುರಕ್ಕೆ ಹೋದಂತಹ ಜನರು ಜಾತ್ರೆಯನ್ನು ಮುಗಿಸಿಕೊಂಡು ಹಿಂದಿರುವುವಾಗ ಪಾಪ ಹರಳಯ್ಯ ನಮಗೆಲ್ಲ ಚಪ್ಪಲಿಯನ್ನು ನೀಡಿ ಕಾಲನ್ನು ತಂಪು ಮಾಡಿದ್ದನು. ಅವನಿಗೆ ಏನಾದರೂ ಕೊಡಬೇಕೆಂದು ಗಂಟು ಗಂಟು ತುಂಬ ಸಿಹಿ ದಿನಸುಗಳನ್ನು ಹೊತ್ತು ತರುತ್ತಾರೆ. ಇಲ್ಲಿ ಹರಳಯ್ಯ-ಕಲ್ಯಾಣವ್ವ ತೀರಿಹೋಗಿರುವುದು ಕಂಡು ಮಮ್ಮಾಲ ಮರುಗಿದರು. ಎಲ್ಲರೂ ಸೇರಿ ಸುತ್ತಲಿನ ಕಟ್ಟಿಗೆ ಕುಳ್ಳನ್ನು ತಂದು ಇಬ್ಬರನ್ನು ಸುಟ್ಟರು. ಹರಳಯ್ಯನಿಗಾಗಿ ತಂದ ಸಿಹಿ ದಿನಸುಗಳನ್ನು ಊರಿಗೆ ಒಯ್ಯಲಾರದೇ ಕೂಸಿನ ಹತ್ತಿರ ಇಟ್ಟು ಅವರವರ ಊರುಗಳಿಗೆ ಹೋದರು. ಈ ಕಡೆ ಈ ಕೂಸಿಗೆ ಪರಶಿವನೇ ಕಾಮಧೇನುವನ್ನು ಕಳುಹಿಸಿ ಹಾಲುಣಿಸುವಂತೆ ಮಾಡಿದನು.

ಹರಳಯ್ಯನ ಮರಣದ ಸುದ್ದಿ ಕೆಲವು ದಿನಗಳಲ್ಲಿ ಸಾಲ ಕೊಟ್ಟಿರುವಂತೆ ಕಗ್ಗಲ್ಲು ಗೌಡನಿಗೆ ಮುಟ್ಟಿತು. ಅಯ್ಯೋ ಸೂಳೇಮಗನೆ ಎಂದು ಅವನ ಭೂಮಿಯನ್ನು ತಂದು ತಿಪ್ಪೆಗೆ ಹಾಕಿ ಅವನ

ಸಾಲ ತೀರದಂತೆಯೇ ಎಂದು ಜೋಪಡಿ ಹತ್ತಿರ ಬರುತ್ತಾನೆ. ಅಲ್ಲಿ ಹರಳಯ್ಯನ ಕೂಸು ಕಾಣುತ್ತದೆ. ಕೂಸನ್ನು ನೋಡಿದ ಗೌಡ, ಎಲೇ ನಿಮ್ಮಪ್ಪ ನನ್ನತ್ರ ನಾಲ್ಕು ವರಹ ಸಾಲಮಾಡಿ ಸತ್ತೇ ಹೋದ ಎಂದವನೇ ಉಗ್ಗಿನ ಗಣಿ ಬಳ್ಳಿ ಹರಿದುಕೊಂಡು ಹರಳಯ್ಯನ ಮಗುವಿನ ಹೆಬ್ಬರಳಿಗೂ, ತನ್ನ ಹೆಬ್ಬರಳಿಗೂ ಕಟ್ಟಿಕೊಂಡು ಕಾಲಿನಿಂದ ಒದೆಯುತ್ತಾ, ತೂರಾಡುತ್ತ ತಂದು ತಿಪ್ಪೆಗೆ ಬಿಸಾಡುತ್ತಾನೆ. ಕಗ್ಗಲ್ಲು ಗೌಡನಿಗೆ ಮೂರುಜನ ಹೆಂಡಂದಿರು ಅದರಲ್ಲಿ ಸಣ್ಣವಳನ್ನು ಮನೆಯಲ್ಲಿಟ್ಟುಕೊಂಡು ದೊಡ್ಡವಳನ್ನು ಹೊರಗೆ ಹಾಕಿರುತ್ತಾನೆ. ದನಮೆಯಿಸಿ ನೀರು, ಸಗಣಿ ಎತ್ತುವುದು ಈಕೆಯ ಕೆಲಸ ಒಂದು ಮಧ್ಯಾಹ್ನ ಸಗಣಿ ಹಾಕಲು ತಿಪ್ಪೆಗೆ ಬಂದಾಗ ಕೂಸಿನ ಶಬ್ದಕೇಳಿ ಗೌಡನ ಹಿರಿಯ ಹೆಂಡತಿ ಅಯ್ಯ ಯಾವ ಪಾಪಸೂಳೆ ಹಡೆದುಕೊಂಡು ಬಿಸಾಕಿ ಹೋಗ್ಯಾಳ ಎಂದು ಆ ಕೂಸನ್ನು ಎತ್ತಿಕೊಂಡು ಬಂದು ಒಂದು ಕಣದ ಕುಳ್ಳಿನ ಮರೆಯಲ್ಲಿ ಬಚ್ಚಿಟ್ಟು ಬರುತ್ತಾಳೆ. ಆ ಕೂಸಿಗೆ ಒಂದು ತಿಂಗಳು ಅಂಬೋದು ಒಂದು ವರ್ಷ ಹೀಗೆ ಐದು ತಿಂಗಳಿಗೆ ಐದು ವರ್ಷದವನಾಗಿ ಬೆಳೆಯುತ್ತಾನೆ. ಕುಳ್ಳಿನಲ್ಲಿದ್ದಾಗ ಪರಶಿವನೇ ಬಂದು ಜೇನು ಉಣಸುತ್ತಿದ್ದ. ಬೆಳೆದ ಈ ಹುಡುಗ ಆ ಕಣದಲ್ಲಿಯೇ ಆಟ ಆಡುತ್ತಿರುತ್ತಾನೆ. ಗೌಡನ ಹಿರಿಯ ಹೆಂಡತಿ ಅವನನ್ನು ಮುದ್ದಿಸಿ, ತಿನ್ನಲು ಸಿಹಿಕೊಟ್ಟು ಕುಳ್ಳಿನ ಪುಟ್ಟಿಯಲ್ಲಿ ರೂಢಿಸಿಕೊಂಡು ಮೇಲೆ ಕಾಣದಂತೆ ಕುಳ್ಳು ತುಂಬಿ ತಮ್ಮ ಮನೆಗೆ ಕರೆತರುತ್ತಾಳೆ.

ಮೆನೆಯಲ್ಲಿ ಊಟಮಾಡಿಸಿ ಮೈ–ಕೈ ತೊಳೆದು ಆಕೆ ಹೊರಗಡೆ ಹೋದಾಗ ಅವನನ್ನು ಒಳಗಡೆ ಬಿಟ್ಟು ಮನೆಗೆ ಬೀಗ ಹಾಕಿಕೊಂಡು ಯಾರಿಗೆ ಕಾಣದಂತೆ ಕಾಪಾಡುತ್ತಾಳೆ. ಅವನು ಮೆಲ್ಲಗೆ ೧೨ ವರ್ಷದವನಾಗಿ ಬೆಳೆಯುತ್ತಾನೆ.

**ಗೌಡನ ಆಳು ಮಗ ಮರುಳಸಿದ್ಧ :**

ಒಂದುದಿನ ಕಗ್ಗಲ್ಲು ಗೌಡ ಪೂಜೆ ಮಾಡಿಕೊಂಡು ಊರ ಮುಂದಕ್ಕೆ ಹೋಗಿದ್ದು ಆ ದಿನ ಹರಳಯ್ಯನ ಮಗ ಆಟವಾಡಿಕೊಳ್ಳುತ್ತಾ ಮನೆಯ ತಲ ಬಾಗಿಲಿಗೆ ಕೂತು ಕಾಲು, ಕೈ ಚಾಚಿಕೊಂಡು ರಾಜನಂತೆ ಕೂತಿದ್ದ. ಇದನ್ನು ನೋಡಿದ ಕಗ್ಗಲ್ಲು ಗೌಡ ಅಯ್ಯೋ ಸೂಳೇ ಮಗನೆ ನನ್ನ ೧೦೧ ಲಿಂಗವನ್ನು ಬತಿಗೆಡಿಸಿದೆಯಲ್ಲಲ್ಲೇ ಮಾದಿಗ ಬಂದು ನಾಲ್ಕಾರು ಬಾರಿ ಕೋಲು ತಂದು ಸಳ್ ಸಳ್ ಎನ್ನುವಂತೆ ಬಡಿದ. ನಮ್ಮ ಮನೆಗೆ ದನ ಕಾಯುವ ಆಳು ಆಗಿ ಇರಲೇ ಸೂಳೆ ಮಗನೆ ಎಂದು ದನವನ್ನೇ ಕಾಯಲು ಹಚ್ಚಿದ. ಯಾಕೆಂದರೆ ಅವರಪ್ಪ ೪ ವರಹ ಸಾಲ ತೆಗೆದುಕೊಂಡಿದ್ದು, ಹರಳಯ್ಯನ ಮಗ ವೃತ್ತಿ ಆರಂಭ ಮಾಡಿದ ದಿನ ದನಗಳನ್ನು ಹೊಡೆದುಕೊಂಡು ಅಡವಿಗೆ ಹೋಗುವುದು, ಮರದ ನೆರಳನ್ನು ನೋಡಿ ಮಲಗಿಕೊಂಡು ಬಿಡುವುದು, ಇದನೆಲ್ಲ ನೋಡಿ ದನ ಕಾಯುವ ಹುಡುಗರು ಬಂದು ಕಗ್ಗಲ್ಲ ಗೌಡನಿಗೆ ಹೋಗಿ,

ಗೌಡರೆ ಎಂತಹ ಆಳನ್ನು ಇಟ್ಟುಕೊಂಡಿರಿ ಅವನು ದನಗಳನ್ನು ತಿರುವುದಿಲ್ಲ. ಸರಿಯಾಗಿ ಮೇಯಿಸುವುದಿಲ್ಲ ಎಲ್ಲವನ್ನು ನಾವೇ ಮಾಡಬೇಕು. ಅದಕ್ಕೆ ನಾಳೆಯಿಂದ ನಾವು ಅವನನ್ನು ಕರೆದುಕೊಂಡು ಹೋಗುವುದಿಲ್ಲ ಎಂದು ಹೇಳಿದರು. ಇತ್ತ ಕಗ್ಗಲ್ಲು ಗೌಡನ ಕಿರಿಯ ಹೆಂಡತಿ ಆ ಹುಡುಗನಿಗೆ ಮನೆಯಲ್ಲಿ ತಿಂದು ಉಳಿದ ಹಳಸಿದ ಊಟವನ್ನು ಕೊಡುತ್ತಿದ್ದಳು. ಆದರೆ ಅವನು ತಿನ್ನುವನಂತೆ ನಟಿಸಿ ಬಾವಿಯಲ್ಲಿ ಹಾಕಿ ಹೋಗುತ್ತಿದ್ದ. ಆಗ ಗೌಡ ಆ ಹುಡುಗನನ್ನು ನೋಡಿ ಲೇ ನೀನು ದನ ಸರಿಯಾಗಿ ಕಾಯುವುದಿಲ್ಲವಂತೆಯಲ್ಲೊ ಮಲಗಿಕೊಳ್ಳುವುದಕ್ಕೆ ಹೋಗ್ತಿಯೆನಲೇ ಮಾದಿಗ ಎಂದು ಬೈಯುತ್ತಾನೆ. ಅದಕ್ಕೆ ಆ ಹುಡುಗ ಅಲ್ಲಾ ನಮ್ಮಪ್ಪ ಎಂತ ಸಾಲ ಮಾಡಿದ್ದನು. ಈ ಸೂಳೆ ಮಗಂತಾಗ, ನನ್ನ ದಿನ ಹೊಡೆಯುತ್ತಾನಲ್ಲಾ ಎಂದು ಕಾಳಪುರದ ಕಡೆಗೆ ದನಕರುಗಳನ್ನು ಹೊಡೆದುಕೊಂಡು ಹೋದ. ಅಲ್ಲಿ ಕಾಳಪುರದ ಗೌಡನ ಹೊಲದಲ್ಲಿ ಜೋಳ[೮] ಮೂಲಿಗು ಹಟ್ಟಿಕಟ್ಟದಂಗೆ ನೆಲೆ ಹಾಕಿ ನಿಂತಿದ್ದು. ಅಲ್ಲಿಗೆ ಹೋಗಿ ದನಗಳನ್ನು ಬಿಟ್ಟು ಮರದ ನೆರಳು ನೋಡಿ ಮಲಗಿಯೇ ಬಿಟ್ಟ, ಆದರೆ ಕಗ್ಗಲ್ಲು ಗೌಡನ ದನಗಳು ಹೋಗಿ ಕಾಳಪುರದ ಗೌಡನ ಹೊಲಕ್ಕೆ ನುಗ್ಗಿ ಇದ್ದಬದ್ದ ಜೋಳವನ್ನು ತಿಂದು ದಂಟು, ರವದಿ ಇಲ್ಲದಂಗೆ ಮುಗಿಸಿ ಕಾಲಕೆದರಿ ಸಗಣಿಹಾಕಿ ಅಲ್ಲಿ ಮಲಗಿಯೇ ಬಿಟ್ಟವು. ಆದರೆ ಕಾಳಪುರದ ಗೌಡ ಹೊಲವನ್ನು ನೋಡಲು ಬರುತ್ತಾನೆ. ಹೊಲವನ್ನು ನೋಡಿ ಉಜ್ಜಿನಿ ಪಟ್ಟಣಕ್ಕೆ ಬಂದು ಕಗ್ಗಲ್ಲು ಗೌಡನ ಮನೆಗೆ ವಿಷಯ ತಿಳಿಸುತ್ತಾನೆ. ಏನಯ್ಯ ಗೌಡ ಎಂತ ಆಳನ್ನು ಇಟ್ಟುಕೊಂಡಿಯಲ್ಲಾ ೫-೬ ಖಂದಗ ಆ ಜ್ವಾಳ ಏನೂ ಉಳಿದಿಲ್ಲ, ಬಾರಯ್ಯ ಹೊಲ ನೋಡು ಎಂದು ಬೈದಾಡಿದ. ಅದಕ್ಕೆ ಕಗ್ಗಲ್ಲು ಗೌಡ ಊರಿನ ಹಿರಿಯರ ಜೊತೆಗೂಡಿ ಕಾಳಪುರದ ಗೌಡನ ಹೊಲಕ್ಕೆ ಬರಲು ತಯಾರಾದರು.

**ಮರಳುಸಿದ್ಧನ ಪವಾಡಗಳು :**

ಆದರೆ ಆಳುಮಗ ಎದ್ದು ಜ್ವಾಳದ ಹೊಲವನ್ನು ನೋಡಿ ದನಗಳನ್ನು ಹೊಲದಿಂದ ಹೊರಕ್ಕೆ ಹೊಡೆದುಕೊಂಡು ಬರಲು ಹೊಲದಲ್ಲಿದ್ದ ಜೋಳ ಹೇಗಿತ್ತು ಹಾಗೆ ಮುಂಜಾನೆಯಿದ್ದಂತೆ ಕಾಣತೊಡಗಿತು. ಕಾಳಪುರದ ಗೌಡನ ಹೊಲ ನೋಡಲು ಕಗ್ಗಲ್ಲು ಗೌಡ ಊರಿನ ಹಿರಿಯರು ಬಂದು ನೋಡುತ್ತಾರೆ. ಎಂಗ ಇದ್ದ ಹೊಲ ಆಂಗೇ ಇರುತ್ತದೆ. ಇದನ್ನು ನೋಡಿ ಎನಯ್ಯ ಗೌಡ ಯಾರ ಮರ್ಯಾದಿ ಕಳೆಕಂತ ಮಾಡಿರಿ. ಯಾರ ಮಾನ ಕಳೆಕಂತ ನಿಂತಿರಿ ಹೊಲವೇನು ಆಗಿಲ್ಲ ಎಂದು ಗದರಿಸಿದರು. ಇತ್ತ ಉಜ್ಜಿನಿಗೆ ಬಂದರು. ಆಳುಮಗ ಮನೆಯಲ್ಲಿ ಇರುವುದನ್ನು ನೋಡಿ ಕಗ್ಗಲ್ಲು ಗೌಡ ಎನೆಲೇ ದನಗಳನ್ನು ಗೌಡನ ಹೊಲಕ್ಕೆ ಯಾಕೆ ಬಿಟ್ಟಿದ್ದೆ ಎಂದ. ಅದಕ್ಕೆ

ಆ ಹುಡುಗ ಇಲ್ಲಪ್ಪ ನಾಯಾಕೆ ಬಿಡಲಿ. ಅಲ್ಲಾಲೇ ನೀನು ಬಿಡದಿದ್ದರೆ ಅವಸ್ಯಾಕ ನನ್ನ ಸುದ್ದಿ ತಂದಿದ್ದಲೇ ಎಂದ ಗೌಡ ಹಿಡಿದುಕೊಂಡು ಬಡೆಯುತ್ತಾನೆ. ಅದಕ್ಕೆ ಹುಡುಗ ಅಲ್ಲ ನಮ್ಮಪ್ಪ ಎಂತ ಸಾಲ ಮಾಡಿದ್ಯಾನು ಎಂಗೆ ಬಡಿತಾನಲ್ಲಾಪ್ಪ ಎಂದು ಬೈಯುತ್ತಾನೆ. ದಿನದಂತೆ ದನಗಳನ್ನು ಕಾಯಲು ಹೋದ.

ದನಗಳನ್ನು ಮೇಯಿಸುತ್ತಿರುವಾಗ ಹೊಲದಲ್ಲಿ ವಡ್ಡರ ಅಜ್ಜ-ಅಜ್ಜಿ ಎಳ್ಳು ಕೊಡವುತ್ತಿದ್ದರು. ಅಲ್ಲಿಗೆ ಹೋಗಿ ಅಜ್ಜಿ, ಅಜ್ಜ ಎಂದ. ಎನಪ್ಪ ಎಳ್ಳು ಕೊಡಬೇಕೇನಪ್ಪಾ ಮೊಮ್ಮಗನೇ ತಿಂತಿಯಾ ಎಂದರು. ಬ್ಯಾಡ ಅಜ್ಜಿ, ಅಜ್ಜ ಆ ಎಳ್ಳು ಪುಳ್ಳೆಗಳನ್ನು ಕೊಡ್ತಿಯಾ. ಅಯ್ಯ ಸ್ವಾಮಿ ತಗೊಂಡು ಹೋಗಪ್ಪ ಅವುಗಳನ್ನು ಏನು ಮಾಡಬೇಕು ಎಂದರು. ಕೊಡವಿದ ಎಳ್ಳಪುಳ್ಳೆಗಳನ್ನು ಹೊತ್ತು ಬೈಲಿಗೆ ಹಾಕಿ ಎಲ್ಲಾ ದನಗಳನ್ನು ಹೊಡೆದುಕೊಂಡು ಬಂದು ಪುಳ್ಳಗಳನೆಲ್ಲಾ ಕಡ್ಡಿಪುಡಿಯಾಗುವಂತೆ ತುಳಿಸಿದ. ಎಳ್ಳುಗಳು ಪಳ್ಳಪಳ್ಳ ಎಂದು ಸಿಡಿದವು. ಅವುಗಳನ್ನೆಲ್ಲಾ ಗಾಳಿಗೆ ತೂರಿ ರಾಶಿಮಾಡಿ ದನ ಕಾಯುವ ಹುಡುಗರನ್ನು ಕರೆದು ನೀವು ಹೋಗಿ ಗೌಡ್ರನ್ನು ಕರೆದುಕೊಂಡು ಬರಬೇಕು, ಅವರಿಗೆ ಹೇಳ್ರಿ ನಿಮ್ಮ ಎಲ್ಲಾ ಸಾಲವನ್ನು ತೀರುಸ್ತಾನಂತೆ, ಬರಬೇಕಾದರೆ ಊರಲ್ಲಿ ಇರುವ ಎಲ್ಲಾ ಬಂಡಿಗಳನ್ನು ಹೊಡೆದುಕೊಂಡು ಖಾಲಿ ಚೀಲಗಳನ್ನು ತೆಗೆದುಕೊಂಡು ಬರಬೇಕು. ಮತ್ತೆ ಸೇರು ತಂದಾನು ಜೊತೆಗೆ ಕುರುಬರ ಮನೆಗೆ ಹೋಗಿ ಡೊಳ್ಳುಗಳನ್ನು ತಗೆಂದು ಬಾ ಎನ್ರಿ ಎಂದು ಹೇಳದ. ದನ ಕಾಯುವ ಹುಡುಗರ ಉಜ್ಜನಿಗೆ ಬಂದ ಗೌಡಗೆ ಹೇಳಿದರು. ಗೌಡ ಎನ್ರೆಲೇ ಇಂತ ಸುದ್ದಿ ಆ ಮಾದಿಗ ಎಲ್ಲಿಂದ ತಂದನಲೇ ಅಷ್ಟೊಂದು ಎಳ್ಳ ಎಂದ. ಇಲ್ರಿ ಗೌಡ್ರ ರಾಶಿಮಾಡಿ ನಿಂತನೆ ಎನೇ ಇರಲಿ ಎಂದು ಕುರುಬರ ಮನೆಗೆ ಹೋಗಿ ಡೊಳ್ಳನ್ನು ತಗೊಂದು ಗಾಡಿಗಳನ್ನು ಹುಡಿಕೊಂಡು, ಚೀಲುಗಳನ್ನು ತಗೊಂದು ಬಂದು ಗೌಡ ಎಂಟಾನು ಎಂಟುದಿನ ತುಂಬಿದರು ಎಳ್ಳನ್ನು ರಾಶಿಯ ಅರ್ಧ ಸವಿಲಿಲ್ಲಾ. ಬಂಡಿಗಳು ಹೇರಿಕೊಂಡು ಹೋದೆ ಹೋಗದೇ ಆಮೇಲೆ ಆ ಹುಡುಗ ಗೌಡನ್ನ ಕೇಳುತ್ತಾನೆ. ಏನ್ರಿ ಗೌಡ್ರೆ ನಮ್ಮಪ್ಪ ಮಾಡಿದ ಸಾಲತೀರಿತೇನ್ರಿ ಎಂದ. ಗೌಡ ಮೂಕಸ್ಮಿತನಾಗಿ ತಲೆ ಅಲ್ಲಾಡಿಸಿ ಹೌದಪ್ಪಾ ಸಾಲ ತೀರಿತು ಎಂದ. ಅದಕ್ಕೆ ಆ ಹುಡುಗ ನಮ್ಮಪ್ಪ ಕೊಟ್ಟ ಕಾಗದ ಪತ್ರಗಳು ಇದ್ದರೇ ಕೊಡ್ರಿ ಎಂದ. ಇಲ್ಲಿ ತಮ್ಮ ನಿಮ್ಮಪ್ಪ ೪ ವರಹ ಸಾಲ ಪಡೆದುಕೊಂಡು ನನ್ನ ಮಕ್ಕಳು ಕೊಡಬೇಕು ನಿನ್ನ ಮಕ್ಕಳು ಪಡೆಯಬೇಕು ಎಂದು ಹೇಳಿದ್ದ ಅಷ್ಟೆ. ಯಾವ ಪತ್ರ ವ್ಯವಹಾರ ನಡೆದಿಲ್ಲ ಎಂದ. ತನ್ನ ಕೆಲಸ ಮುಗಿದ ಮ್ಯಾಲೆ ಗೌಡ ಊರಿಗೆ ಹೋದ. ಉಜ್ಜನಿ ಎಂಬ ಪಟ್ಟಣದ ಸುತ್ತೆಲ್ಲಾ ಈ ಸುದ್ದಿ ಹಬ್ಬಿ ಎಲ್ಲರು ಆ ಹುಡುಗನ ಪವಾಡ ನೋಡಲಿಕ್ಕೆಂದೆ ಹೋದರು. ಆ ಹುಡುಗ ಎಳ್ಳಿನ ರಾಶಿ ಮೇಲೆ ಕುಳಿತುಕೊಂಡಿದ್ದ. ಜೊತೆಗೆ ಅಲ್ಲಿದ್ದ ದೈವ ಪುರುಷರು ಹೋದರು. ಅವರಲ್ಲಿ ಕೋಟ್ರಪ್ಪ,

ಮೈಲಾರಿ ಲಿಂಗಪ್ಪ, ವೀರಭದ್ರ, ತಿಪ್ಪೇಸ್ವಾಮಿ, ನುಂಕೆಮಲೆ ಸಿದ್ಧಪ್ಪ, ಬರಿ ಸಿದ್ಧಪ್ಪ, ಜಟಿಂಗಪ್ಪ ಎಲ್ಲರು ಹೋದರು. ಆಗ ಆ ಹುಡುಗ ಮೈಲಾರ ಲಿಂಗಪ್ಪನ್ನು ಕರೆದು ಎ ಮೈಲಾರ ಲಿಂಗಪ್ಪ ನೀನು ಉಜ್ಜನಿಗೆ ಹೋಗಿ ಉಜ್ಜನಿಯ ಜಾಗ ಹೈತಾ ಎಲ್ಲಾ ನೋಡಿಕೊಂಡು ಬಾರಪ್ಪ ಎಂದ.

ಮೈಲಾರ ಲಿಂಗಪ್ಪ ಬಂದು ನೋಡಿ ಅಲೆಲೆಲೇ ಎಂದು ಉಜ್ಜನಿಯಲ್ಲಿ ಜಾಗ ನನಗೆ ಪಿತಪ್ಪ ನಿನಗೆ ಇಲ್ಲಾ ಎಂದು ಅದನ್ನು ಕೇಳಿ ಆ ಹುಡುಗ ಮೈಲಾರ ಲಿಂಗಪ್ಪನ್ನ ಒಂದೇ ಸಾರಿ ಜಾಡಿಸಿ ಒದ್ದರೆ ಉಜ್ಜನಿ ಕೆರೆ ಕೋಡಿಗೆ ಹೋಗಿಬಿದ್ದ. ಆಗ ಹುಡುಗ ಶರಣಪ್ಪ ನೀನು ಕಾನಮಡಿಗಿಗೆ ಹೋಗಿ ಶರಣಪ್ಪ ಅನಿಸ್ಯಾಕ, ತಿಪ್ಪಣ ನೀನು ನಾಯಕನಹಟ್ಟಿಗೆ ಹೋಗಿ ತಿಪ್ಪೇಸ್ವಾಮಿ ಅನಿಸ್ಯಾಕ, ವೀರಭದ್ರಪ್ಪ ನೀನು ಕೊಡೆದಗುಡ್ಡಕ್ಕೆ ಹೋಗಿ ಕೊಡದಗುಡ್ಡದ ಈರಣ್ಣ ಅನಿಸ್ಯಾಕ, ಕೊಟ್ರಪ್ಪ ನೀನು ಕೊಟ್ಟೂರಿಗೆ ಹೋಗಿ ಕೊಟ್ಟೂರೇಶ್ವರ ಅನಿಸ್ಯಾಕ, ಬರಿಸಿದ್ಧಪ್ಪ ನೀನು ಭೈರವದೇವರಗುಡ್ಡಕ್ಕೆ ಹೋಗಿ ಬರಿಸಿದ್ಧಪ್ಪ ಅನಿಸ್ಯಾಕ ಎಂದ. ಕೊನೆಗೆ ಜಟಿಗಪ್ಪನನ್ನು ಕರೆದು ಜಟಿಗೆಪ್ಪ ಉಜಿನಿಯಾಗ ನನಗೆ ಜಾಗ ಐತಾ ಇಲ್ಲಾ ನೋಡಿಕೊಂಡು ಬಾರಪ್ಪ ಎಂದ. ಅದಕ್ಕೆ ಜಟಿಗಪ್ಪ ಉಜ್ಜನಿಗೆ ಜಾಗ ಐತಪ್ಪ, ನನಗೆ ಇಲ್ಲಾ ಎಂದು ಹೇಳಿದ. ಅದಕ್ಕೆ ಆ ಹುಡುಗ ಜಟಿಗಪ್ಪನ ನಿಷ್ಠೆಯನ್ನು ಮೆಚ್ಚಿ ನೋಡಪ್ಪ ಜಟಿಗಣ್ಣ ನನಗೆ ಬರೋ ಹಾಲೂ–ಮಾಲು ನಿನಗೆ ಮೊದಲು ಬರಲಿ ಎಂದು ಜಟಿಗಪ್ಪನ ಊರು ಕಾಯಲಿಕ್ಕೆ ಇಟ್ಟಿದ್ದಾನೆ. ಅದು ಆದ ಮೇಲೆ ಗೌಡ ನೂರೊಂದು ಲಿಂಗ ಬತೆಗೆಟ್ಟುವುದ್ದಲ್ಲಾ ಅವುಗಳಿಗೆ ಶಾಂತಿ ಮಾಡಿಸಲು ಲೋಕದ ಮ್ಯಾಲೆ ಇರುವ ಎಲ್ಲಾ ಸಾಧು–ಸಂತರನ್ನ ಗಾಣಂಗಳನ್ನು ಕಗ್ಗಲು ಗೌಡ ಕರೆಯಿಸಿ ಹೋಳಿಗೆ, ಹುಗ್ಗಿ, ಕಾರ್ಜಿಕಾಯಿ, ಕರಿಗಡಬು, ಹಪ್ಪಳ, ಸಂಡಿಗೆ ಎಲ್ಲಾ ತಿನಿಸುಗಳನ್ನು ಮಾಡಿಸಿ ಎಲ್ಲರನ್ನು ಕರೆಯಿಸಿ ಊಟಕ್ಕೆ ಕೂಡಿಸುವ ಹೊತ್ತಿಗೆ ಒಂದು ಪವಾಡ ಪುರುಷ. ಆ ಹುಡುಗನು ಊಟಕ್ಕೆ ಬಂದು ಕುಳಿತು ಬಿಡುತ್ತಾನೆ. ಅಯ್ಯ ಎಂತ ಕೆಲಸ ಮಾಡಿಬಿಟ್ಟ ಮಾದಿಗ ಬಂದು ಜಂಗಮರ ಜೊತೆಗೆ ಕೂಡುವುದು ಎಂದು ಕಗ್ಗಲ್ಲು ಗೌಡ ಅವನನ್ನು ಹೊಡೆದು ಚಂಡು ಹಿಡಿದು ಹೊರಕ್ಕೆ ತಳ್ಳಿದ. ಆ ಹುಡುಗ ಏನು ಅನ್ನದೆ ಸುಮ್ಮನೆ ಕೂಡ್ಲಿಗಿ ಹಾದಿ ಹಿಡಿದುಕೊಂಡು ಹೋಗುತ್ತಾನೆ. ಅದೇ ದಾರಿಯಲ್ಲಿ ವನಿತಮ್ಮದೇವಿ ನೋಡಿ ಅಣ್ಣ ತಡಿ ಎಲ್ಲಿಗೆ ಹೊಂಟಿ ನಾನು ಬರ್ತೀನಿ ಎಂದಳು. ಇಬ್ಬರು ಮಾತಾಡ್ತ ಒಂದು ಆಲದ ಮರದಡಿಗೆ ಕೂತುಬಿಟ್ಟರು. ಅದೇ ಸಿದ್ದವನ ವರ್ತಿಯಾಗಿದೆ. ಇತ್ತ ಗೌಡನ ಮನೆಯಲ್ಲಿ ಎಲ್ಲರೂ ಊಟಕ್ಕೆಂದು ಕುಳಿತುಕೊಂಡರೆ ಮಾಡಿದ ಊಟವೆಲ್ಲಾ ಹುಳ ಲಿಬಿ ಲಿಬಿ ಎನ್ನ ಹತ್ತಿದವು. ಕರಿಗಡಬು ಕಪ್ಪ, ಕರ್ಜಿಕಾಯಿ ಮಡುಗೊಬ್ಬೆ, ಅನ್ನ, ಹುಳ, ಸಾರು ಹುಳ ಎಲ್ಲಾ ಹುಳಗಳ ರಾಶಿಯಾಗಿ ಎಲ್ಲರು ಊಟ ಮಾಡದೇ ಎದ್ದರು. ಗೌಡಗೆ ಏನಯ್ಯ ಗೌಡ ದೊಡ್ಡ ಮನುಷ್ಯ ಅಂತ ಬಂದರೆ ನಮ್ಮನ್ನ ಹಾವು, ಚೇಳು, ಕಪ್ಪೆ, ಹುಳ ತಿನ್ನಕಂತ

ಕರಿಸಿದೆಯ್ಯ ಎಂದು ಗೌಡ ಆ ಹುಡುಗನ್ನ ಬೈದು ಕಳಿಸಿದ್ದು ತಪ್ಪಾಯಿತು, ಅವನು ಪವಾಡ ಪುರುಷನಗ್ಯಾನ, ಅವನನ್ನು ಎಲ್ಲಿದ್ದರೂ ಹುಡಿಕಿ ಕರೆ ಕಳುಹಿಸು ಎಂದರು. ಗೌಡ ಆಳ ಮಕ್ಕಳನ್ನು ಕರೆದು ಅವನು ಎಲ್ಲಿ ಹೋಗ್ಯಾನ ಹುಡಿಕಿಕೊಕರೆದುಕೊಂಡು ಬರ್‍ರೇಲೇ ನನ್ನ ಮರ್ಯಾದೆ ಉಳಿಯಾಂಗಿಲ್ಲ ಎಂದ. ಆಲದ ಮರದಡಿಗೆ ಕುಳಿತ ಅಣ್ಣ-ತಂಗಿ, ಅಣ್ಣ ಅವರು ಈಗ ಕರೆಯಾಕ ಬರುತ್ತಾರೆ. ನೀನು ಅಂಗ ಕರೆದು ಕೂಡಲೇ ಹೋಗಬೇಡ ಎಂಗ ಹೋಗವ್ವ ಎಂದ.

ನನಗೆ ಆನೆ ಶೃಂಗಾರ ಮಾಡಿಕೊಂಡು ಭೂವತ್ತಿಕೂಡಿ ಮಾಡಿಕೊಂಡು ಅಡ್ಡ ಪಲ್ಲಕ್ಕಿ ತಗೊಂದು ಮ್ಯಾಳ, ಕಾಳಿ ತಗೊಂದು ಬಂದರೆ ನಾವು ಬರುತೀವಿ. ಅನ್ನೋಣ ಅಂದ್ಲು. ವನಿತವ್ವ ಆಗ್ಲಿ ಬಿಡವ್ವ ಅವರು ಬರಲಿ ಎಂದ. ಆಳು ಮಕ್ಕಳು ಹುಡುಕಿಕೊಂತ ಬಂದ್ರು, ಬಾರಪ್ಪ ಗೌಡ್ರು ಕರೆಕಳುಹಿಸ್ಯರ ನೀನು ಬರಲೇಬೇಕಂತೆ ಅಂದಾರ. ಅದಕ್ಕೆ ಆ ಹುಡುಗ ಗೌಡಂತಾಗ ನಂದೆನೈತಪ್ಪ ಇದ್ದ ಸಾಲನಾ ತೀರಿಸಿದಿನಿ ಬರೋದಿಲ್ಲಾ ಎಂದು ಹೇಳಿದ. ಇಲ್ಲಾ ಬರ್‍ಲೇಬೇಕಂತೆ ಅಂದಾಗ ತನ್ನ ಎಲ್ಲಾ ಷರತ್ತುಗಳನ್ನು ಹೇಳಿದಾಗ ಒಪ್ಪಿಕೊಂಡು ಆನೆ ಶೃಂಗಾರ ಮಾಡಿಕೊಂಡು, ಅಡ್ಡಪಲ್ಲಕ್ಕಿ ತಗೊಂದು ಅದರಾಗ ಅವನನ್ನು ಕುಳ್ಳಿರಿಸಿ, ಕಾಳಿ, ಮ್ಯಾಳ, ಭೂಛತ್ರಿ ಹಿಡಕೊಂಡು ಸಕಲ ಗೌರವದಿಂದ ಮೆರೆವಣಿಗೆ ಮೂಲಕ ಕರೆದುಕೊಂಡು ಬರುತ್ತಾರೆ. ಕಗ್ಗಲ್ಲು ಗೌಡನು ಮನೆಗೆ ಬಂದು ಆ ಹುಡುಗ ಊಟವನ್ನು ನೋಡಿ ಆ ಅನ್ನದ ಮೇಲೆ ಕೈ ಆಡಿಸುತ್ತಾನೆ. ಆಗ ಊಟದಲ್ಲಿದ್ದ ಹಾವು, ಚೇಳು, ಕಪ್ಪೆ, ಹುಳ ಮಾಯವಾಗಿ ಮಾಡಿದ ಊಟವೆಲ್ಲಾ ಘಮಘಮ ಎಂದು ವಾಸನೆ ಬರಲಿಕ್ಕೆ ಶುರುವಾಗುತ್ತದೆ. ಆಗ ಎಲ್ಲರೂ ಊಟಮಾಡಿ ಆ ಹುಡುಗನ ಮಹಿಮೆ ಪವಾಡವನ್ನು ನೆನೆಯುತ್ತ ಎದ್ದು ಹೋದರು ಮತ್ತೆ ಪವಾಡ ಪುರುಷ ತನ್ನಲ್ಲಿದ್ದ ತಂದೆ ಸಂಪಾದಿಸಿದ ಬಂಗಾರದ ಹಿಕ್ಕಳ, ಬಂಗಾರದ ರಂಪ್ಪಿಗೆ, ಬಂಗಾರದ ಹುಳಿ, ಬಂಗಾರ ಹಡಿಗೆಲ್ಲು, ಬಂಗಾರದ ಹಂಡೆವು ಎಲ್ಲವನ್ನು ತಗೊಂದು ಶ್ರೀ ಮರುಳಸಿದ್ದನಾಗಿ ಗೋಪುರ ಕಟ್ಟಿಸಿಕೊಂಡು ತನ್ನ ಎಲ್ಲಾ ವಸ್ತುಗಳನ್ನು ಗೋಪುರದ ಮೇಲೆ ಇಟ್ಟು ಕರ್ನಾಟಕದ ಬಹು ಊರುಗಳಲ್ಲಿ ಪವಾಡಗಳನ್ನು ಮಾಡಿ ಉಜ್ಜಿನಿ ಮರುಳಸಿದ್ದನಾಗಿ ಪವಾಡ ಪುರುಷನಾಗಿ ಲೋಕಕ್ಕೆ ಬೇಳಕಾಗಿದ್ದಾನೆ. ಇವನೇ ಶ್ರೀ ಮರುಳಸಿದ್ದೇಶ್ವರ. ಈ ಕಥೆಯು ಜನಪದರ ಬಾಯಿಯಿಂದ ಬಾಯಿಗೆ ಬಂದ ಕಥೆಯಾಗಿದೆ.

**ಜರಿಮಲೆಯ ನಾಯಕರ ನಾಗೇನಹಳ್ಳಿ ಕಾಳಗದ ಕಥೆ ಮತ್ತು ಲಾವಣಿ :**

ನಾಗೇನಹಳ್ಳಿ ಉಜ್ಜನಿಗೆ ಎರಡು ಮೈಲು ದೂರದಲ್ಲಿದೆ. ಅಲ್ಲೊಂದು ಪುರಾತನ ಪಾಳೆಯ ಪಟ್ಟದ ಈ ಗ್ರಾಮದ ಹತ್ತಿರ ಒಂದು ಗುಡ್ಡವಿದೆ.ಟ್ಟಾ ಗುಡ್ಡದ ಕೆಳಗಡೆ ಇರುವ ಊರು

ನಾಗೇನಹಳ್ಳಿ. ಹಿಂದೆ ಜರಿಮಲೆ ನಾಯಕ ಇಲ್ಲಿಗೆ ಬೇಟೆಗೆ ಹೋಗಿದ್ದನಂತೆ ಅದೇ ಸಮಯಕ್ಕೆ ನಾಗೇನಹಳ್ಳಿ ಪಾಳೇಗಾರನೂ ಬೇಟೆಗೆ ಬರುತ್ತಾನೆ. ಆಗ ಬಿಳಿಹಂದಿಯೊಂದು ಓಡಿ ಹೋಗಿ ಪೊದೆ (ಪೆಳೆ)ಯಲ್ಲಿ ಅಡಗಿಕೊಂಡಿತು. ಇಬ್ಬರೂ ಅದನ್ನು ಬೆನ್ನಟ್ಟಿ ಹೋದರು. ಪೆಳೆಯನ್ನು ಹೊಕ್ಕು ನೋಡುತ್ತಾರೆ. ಆ ಪೆಳೆಯ ಮರದ ಕೊಂಬೆಗೆ ನೇತಾಡುವ ತೊಟ್ಟಿಲಲ್ಲಿ ಉಜ್ಜನಿಯ ಗುರುಗಳು ಕುಳಿತಿದ್ದರು. ಗುರುಗಳು ಇವರನ್ನು ನೋಡಿ ಇಲ್ಲಿಂದಲೇ ಗುಡಿ ಸ್ಥಾಪನೆ ಮಾಡಬೇಕೆಂದು ಆದೇಶಿಸಿದರಂತೆ. ಎರಡು ಪಂಗಡದ ರಾಜರು ಮುಂದಾದರು. ಪರಸ್ಪರ ಕಾಳಗ ಮಾಡಿ ಅದರಲ್ಲಿ ಯಾರು ಗೆಲ್ಲುವರೊ ಅಂಥವರು ಗುಡಿ ಕಟ್ಟಬೇಕೆಂದು ಷರತ್ತು ಹಾಕಿದರು. ಆ ಕೂಡಲೇ ಜರಿಮಲೆ ನಾಯಕ ಉಡುದಾರವನ್ನು ಕಿತ್ತು ಎಸೆದು ನಾಗೇನಹಳ್ಳಿ ಪಾಳೇಗಾರನನ್ನು ಗೆಲ್ಲುವವರೆಗೂ ತಾನು ಉಡುದಾರವನ್ನು ಕಟ್ಟುವುದಿಲ್ಲವೆಂದು ಪ್ರತಿಜ್ಞೆ ಮಾಡಿದ. ಅನಂತರ ಯುದ್ಧದಲ್ಲಿ ಜಯಗಳಿಸದೇ ಇದ್ದುದ್ದಕ್ಕಾಗಿ ಅಂದಿನಿಂದ ಇಂದಿನವರೆಗೂ ಈ ವಂಶಸ್ಥರು ಉಡುದಾರ ಕಟ್ಟುವುದಿಲ್ಲ. ತನ್ನ ಊರಿಗೆ ಬಂದ ಜರಿಮಲೆ ನಾಯಕ ಯುದ್ಧಕ್ಕೆ ಸನ್ನದ್ದರಾಗಲು ತನ್ನ ದಂಡಿಗೆ ಆದೇಶವನ್ನಿತ್ತನು. ಕೊಟ್ಟೂರು, ಬಲ್ಲಾರಿ ಗೋಣ್ಯನೆಂಬುವ ವೀರನಿಗೆ ಹೇಳಿ ಕಳಿಸಿದ ಬಲ್ಲಾರಿ, ಗೋಣ್ಯನ, ಜರಿಮಲೆ ನಾಯಕನ ಮಾತಿನಂತೆ ತನ್ನ ತಾಯಿ ಆಶೀರ್ವಾದ ಪಡೆದು ಜಯ ಪಡೆದೇ ತಾಯಿಯ ಮುಖ ನೋಡುವುದಾಗಿ ಶಪಥಗೈದು ಯುದ್ಧಕ್ಕೆ ಬಂದ. ಇತ್ತ ನಾಗೇನಹಳ್ಳಿಯ ತಳವಾರ ಓಬಣ್ಣ, ಮ್ಯಾಸರ ಓಬಣ್ಣನೆಂಬ ಯುದ್ಧ ತಂತ್ರಜ್ಞರ ಮುಂದೆ ಜರಿಮಲೆ ದಂಡು ದಿಕ್ಕು ಕಾಣದಾಯಿತು. ಬಲ್ಲಾರಿ ಗೋಣ್ಯ ವೀರವೇಶದಿಂದ ಕಾದಾಡಿ ೧೦೦೦೦ ಜನರ ದಂಡನ್ನು ದಿಕ್ಕಾಪಾಲು ಮಾಡಿದ. ಬಲ್ಲಾರಿ ಗೋಣ್ಯ ಗೆಲುವಿನ ಸಂಕೇತಕ್ಕಾಗಿ ನಾಗೇನಹಳ್ಳಿ ದೇವಾಲಯದಿಂದ ಪಲ್ಲಕ್ಕಿಯೊಂದನ್ನು ಹೊತ್ತುಕೊಂಡು ಬರುತ್ತಿರುತ್ತಾನೆ. ಪೆಳೆಯಲ್ಲಿ ಅಡಗಿದ್ದ ವೈರಿಯೊಬ್ಬ ಬಲ್ಲಾರಿ ಗೋಣ್ಯಾನ ಮೇಲೆ ಕೋವಿನಿಂದ ಗುಂಡು ಹಾರಿಸಿದ. ಈ ಶಬ್ದ ಕೇಳಿ ಬಲ್ಲಾರಿ ಗೋಣ್ಯನ ಗೆಳೆಯ ಶಿವಲಿಂಗ ಬಂದು ನಿನಗೆ ಗುಂಡು ಹಾರಿಸಿದವನ ಸುಳಹು ಹೇಳು ಎಂದು ಆರ್ಭಟಿಸಿದ. ಓಡಿ ಹೋಗುತ್ತಿದ್ದ ವೈರಿಯನ್ನು ಹಿಡಿದು ಕೊಲ್ಲಲು ಉಧ್ಯಕ್ತನಾದ. ಆದರೆ ಸಾವಿನ ಮಡಿಲಲ್ಲಿದ್ದ ಸ್ನೇಹಿತನ ಶವ ಸಂಸ್ಕಾರಕ್ಕೆ ಅಣಿಮಾಡಿ ಚಿತೆ ಎರಿಸಿದನು. ಗೋಣ್ಯನ ಕತ್ತಿ ತನ್ನ ಚಿತೆಯಲ್ಲಿಯೇ ಹಾಕಲು ಕೇಳಿಕೊಂಡಿತು. ಇದನ್ನೇ ಕೇಳಿದ ಶಿವಲಿಂಗ ಜೀವದ ಗೆಳೆಯನಿಲ್ಲದ ಮೇಲೆ ತನ್ನ ಬಾಳು ವ್ಯರ್ಥವೆಂದರಿತು ಕತ್ತಿಯೊಂದಿಗೆ ಚಿತೆಯೊಳಗೆ ಹಾರಿಬಿಟ್ಟು ಇದೆಲ್ಲವನ್ನೂ ನೋಡಿದ ವೈರಿ ಕೊವಿಕಾರನಿಗೆ ಮನನೊಂದು ಚಿತೆಯ ಮೇಲೆ ಹೂವಿನ ಮಳೆ ಸುರಿಯಿತು. ಇದೇ ಜರಿಮಲೆ ನಾಗೇನಹಳ್ಳಿ ಪಾಳೆಗಾರರ ಕಥೆ.

**ನಾಗೇನಹಳ್ಳಿ ಜರಿಮಲೆ ನಾಯಕರ ಕಾಳಗದ ಕಥೆಯ ಲಾವಣಿ ರೂಪ :**

ಜರಿಮಲೆ ನಾಯಕ ತನ್ನ ದಂಡನ್ನು ಕುರಿತು ನಾಗೇನಹಳ್ಳಿ ಕಾಳಗಕ್ಕೆ ಸಿದ್ಧರಾಗಿರಿ ಎಂದು ಹೇಳಿದ. ಸುತ್ತಮುತ್ತಲಿನ ದೇಶದ ಸೈನ್ಯಾಧಿಪತಿಗಳು ದಂಡನ್ನು ಕುರಿತು,

೧. ನಾಗೇನಹಳ್ಳಿದೊಂದು ಈಳೆವ ಹಿಡಿದೀನಿ
ಒಪ್ಪಿತೋ ಒಪ್ಪಲಿಲ್ಲೊ ಮಕ್ಕಳರಾ॥

೨. ಜರ್ಮಲೆ ಗೋದೇವಪ್ಪಾ ವರ್ಮಲೆ ಗೋದೇವಪ್ಪಾ
ನಾಗೇನಹಳ್ಳಿಗೆ ನಾ ಒಲ್ಲೆವೆಪ್ಪಾ॥

ಕೋಲು ಕೋಲೆನ್ನ ಕೋಲೆ ರನ್ನಾದ ಕೋಲೆ ಕೋಲೆನ್ನ
ಕೋಲು ಸಿರಿ ಗಾಂಧಾದ ಕೋಲೆ ಕೋಲೆನ್ನ ಕೋಲೆ॥

೩. ಹಿಡಿಯೊಲೆ ರಣಗಾಳಿ ಬಡಿಯೊಲೆ ಹುಲಿ ತಪ್ಪಡಿ
ದಾದಯ್ಯ ರಂಗಿನ ದರ್ಶನಕ್ಕೋ ಗೋಣ ನಡಿ
ಕೋಲೆ ಕೋಲೆನ್ನ ಕೋಲೆ ರನ್ನಾದ ಕೋಲೆ ಕೋಲೆನ್ನ
..........................................................................॥

ಹೀಗೆ ದಂಡಿನವರು ನಾಗೇನಹಳ್ಳಿಯ ಹೆಸರು ಹೇಳುತ್ತಲೇ ಭಯಭೀತರಾದರು. ಬೇರೆ ಎಲ್ಲಾದರೂ ಯುದ್ಧಕ್ಕೆ ಹೋದವೆ. ನಾಗೇನಹಳ್ಳಿಗೆ ಹೋಗಲಾರವೆಂದು ಹೇಳಿದರು. ಆಗ ಮಹಾಪರಾಕ್ರಮಿ ಎನಿಸಿದ ಕೊಟ್ಟೂರು, ಬಲ್ಲಾರಿ ಗೋಣೆಪ್ಪನ ಹತ್ತಿರ ಬಂದರು. ಬಲ್ಲಾರಿ ಗೋಣೆಪ್ಪನ ತಾಯಿ ಮಗನನ್ನು ಕುರಿತು.

೪. ಎಳೆಪ್ಪಾ ಮರಕ್ಕೆರಿ ಎಷ್ಟು ಹೊತ್ತು ಮಲಗಿಯಾ
ಮಾಲೆ ಬಂದವೆ ನಿನ್ನ ಸದರಿಗೆ
ಕೋಲೆ ಕೋಲೆನ್ನ ಕೋಲೆ ಕೋಲೆ ಕೋಲೆನ್ನ ಕೋಲೆ
ಕೋಲೆ ಸಿರಿಗಂಧಾದ ಕೋಲೆ ಕೋಲೆ ಕೋಲೆನ್ನ ಕೋಲೆ॥

೫. ಭಾರಿ ಭೂಪ ಎಳೆ ಮೀಸೆ ತಿರುವುತ್ತ ಎದ್ದನು
ಗಗ್ಗರಿ ತಾತ ಹುಡುಗರನ ಕುಣಿಸುತ್ತ
ಕೋಲೆ ಕೋಲೆನ್ನ ಸಿರಿಗಂಧಾದ ಕೋಲೆ॥

೬.     ಮಾಯಕೋಂಡದ ಹುಡುಗರು ಮಾತಲಿ ಬಲು ಜಾಣರು
ಮಾವಿನ ಎಲೆಯ ಗೋಲೆ ಬರೆದಾರು
ಕೋಲೆ ಕೋಲೆನ್ನ॥

ಈ ವಿಷಯವನ್ನು ತಿಳಿದ ಬಲ್ಲಾರಿ ಗೋಣ್ಯ ಜರಿಮಲೆ ನಾಯಕರನ್ನು ಕುರಿತು.

ತಾನು ಒಂದು ಪಕ್ಷ ಯುದ್ಧದಲ್ಲಿ ಮಡಿದರೇ ತನ್ನ ಇಬ್ಬರು ವೇಶ್ಯಯರಿಗೆ ಇಬ್ಬರು ಹೆಂಡರಿಗೆ ಮತ್ತು ತಾಯಿಗೆ ಎರಡು ಆನೆ ಹೊರುವಷ್ಟು ಹಣ, ಎರಡು ಹಗೇವು ಜೋಳ ಮತ್ತು ಎರಡು ಕರೆಯುವ ಎಮ್ಮೆಯಂತೆ ಒಬ್ಬರಿಗೆ ಕೊಡಬೇಕೆಂದು ಒಪ್ಪಂದ ಮಾಡಿಕೊಂಡ. ಆಗ ಬಲ್ಲಾರಿ ಗೋಣ್ಯಪ್ಪನ ತಾಯಿ ಮಗನನ್ನು ಕುರಿತು ಈ ರೀತಿ ಹೇಳುತ್ತಾಳೆ.

೭.     ಮುಂದಕ್ಕೆಯಿಟ್ಟಂತಹ ಕಾಲು ಹಿಂದಕ್ಕೆ ಇಟ್ಟರೆ
ಗೋಣ್ಯ ಬರುವದಾರಿಗೆ "ದೋಣಿ" ಕೆತ್ತಿಸೇನು
ಬಲ್ಲಾರಿ ಗೋಣ್ಯ ನಾಯಿ ಗೋಣ್ಯಗೆ ಅಂಚೆರಿ ಹಾಕಿಸೆನು
ಕೋಲು ಕೋಲೆನ್ನ॥

ಆಗ ಬಲ್ಲಾರಿ ಗೋಣ್ಯ ತಾಯಿಯನ್ನು ಕುರಿತು

೮.     ಕಾಸಿನ್ಯ ಹೆಣ್ಣು ಮಗಳೇ ನೀನು ಏಸು ಮಾತ್ನಾಡಿದರೆ
ತಿರುಗಿ ಬಂದು ನಿನ್ನ "ಮಾರಿ" ನೋಡುವನೆ
ಹಡೆದವ್ವ ತಾಯಿ ಮತ್ತೆ ನಿನ್ನ ಮಾರಿ ನೋಡುವನೆ
ಕೋಲು ಕೋಲೆನ್ನ॥

ಜರಿಮಲೆ ನಾಯಕ ೨೦,೦೦೦ ದಂಡಿನೊಂದಿಗೆ ಬಲ್ಲಾರಿ ಗೋಣ್ಯನ ಸೇನಾಧಿಪತ್ಯದಲ್ಲಿ ಒಂದು ಉಜ್ಜಿನಿ ಕೆರೆಯಲ್ಲಿ ಡೇರಿ ಹೊಡೆದ.

**ಮ್ಯಾಸರ ಓಬವ್ವ ಮತ್ತು ಓಬಣ್ಣ :**

ನಾಗೇನಹಳ್ಳಿ ಕೋಟೆಯ ಮೇಲೆ ಮ್ಯಾಸರ ಓಬವ್ವ ಬಹಳ ದಿಟ್ಟತನದ ಹೆಂಗಸು. ಕೋಟೆಯ ರಕ್ಷಣೆಗಾಗಿ ನಡುಕಟ್ಟಿ ನಿಂತಿದ್ದಾಳೆ. ಕ್ವಾಟೆಯನ್ನು ಏರಿಬರುವ ಶತ್ರು ಸೇನ್ಯದ ಮೇಲೆ ಎರಗಿ ಸುಮಾರು ೨೦೦೦ ದಂಡನ್ನು ಕೊಂದಳು.

೯.     ಮ್ಯಾಸರ ಓಬವ್ವ ಭಾರಿ ಬಲವಂತಾಳು
ಮೂರು ಸಾವಿರ ದಂಡ್ನರಾಗಿ ಕಾಳೆತಿ ಕೊಂದಾಳು
ಕೋಲು ಕೋಲನ್ನಾ॥

೧೦. ತಳವಾರ ಓಬಣ್ಣ ಭಾರಿ ಬಲವಂತಾನು ಮೂನ್ನೂರು
ಮಣ ಮದ್ದು ಗುಂಡು ಹೊತ್ತಾನು
ತಳವಾರ ಓಬಣ್ಣ ಬಗಲಾಗ ಬಾರಿ ಕೋಲು
ಹಿಡಕೊಂಡು ಹಲುಕಿಸಿದಾನು
ಕೋಲು ಕೋಲೆನ್ನ॥

ಇದರಿಂದ ಜರ್ಮಲೆ ದಂಡು ನಿರ್ನಾಮವಾಗಿ ಹಿಂದಕ್ಕೆ ಪಲಾಯನ ಮಾಡಿತು. ಪಾಳೆಗಾರ ಉಪಾಯವಿಲ್ಲದೆ ಹಿಂದಕ್ಕೆ ಓಡಿದ. ಇಷ್ಟು ಹೊತ್ತಿಗೆ ಬಲ್ಲಾರಿ ಗೋಣಿಗೆ ಮದವಿಳಿದು ಎದ್ದು ನೋಡುತ್ತಾನೆ. ಎಲ್ಲಿ ನೋಡಿದರೂ ಸೋಲಿನ ಭೀಕರತೆಯ ದೃಶ್ಯ. ಇದ್ದಲ್ಲಿಂದಲೇ ಸುರಂಗ ಹೊಡೆದು ನಾಗೇನಹಳ್ಳಿಗೆ ಬಂದು ಕೋಟೆಯನ್ನು ಕೆಡವಿದಂತೆ ಒಬ್ಬನನ್ನು ಎದುರಿಸುವುದು ಅಧ್ಯಾವ ದೊಡ್ಡ ಕೆಲಸ ಎಂದು ನಾಗೇನಹಳ್ಳಿಯ ದೊರೆ ಗೋಣಿಯನ್ನು ಕುರಿತು ಈ ರೀತಿ ಹೇಳುತ್ತಾನೆ.

೧೧. ಹತ್ತು ಸಾವಿರ ದಂಡು ನೆಮದು ಒಂದೇ ಜನ್ಮ
ಗೋಣಿ ನಿಮ್ಮದು ಮಗ್ಗಲ ಎಲಿಬು ನುಗ್ಗದುಳಿಸೇವೂ
ಪಕ್ಕದ ಎಲುಬು ಮುರಿದುಳಿ ಸೇವೂ ಬಲ್ಲಾರಿ ಗೋಣ್ಯಾ
ಕೋಲು ಕೋಲನ್ನ॥

**ಬಲ್ಲಾರಿ ಗೋಣ್ಯನ ಪರಾಕ್ರಮ :**

ಈ ಮಾತನ್ನು ಕೇಳಿ ಬಲ್ಲಾರಿ ಗೋಣ್ಯ ವೀರಾವೇಶದಿಂದ ತನ್ನ ಸಾಮರ್ಥ್ಯ ತೋರಿಸಿಯೇ ಬಿಟ್ಟ ಹೇಗೆಂದರೆ,

೧೨. ಬಾಯಾಗಳ ಮಾತು ಬಾಯೊಳಗೆ ಇದ್ದಂತೆ
ಹಿಂದಕ್ಕೆ ಎಂಟು ಮಳೆ ಸೆಗೆದಾನು ಬಲ್ಲಾರಿ ಗೋಣ್ಯ
ಕುದುರೆ ಕೊಡ್ಡೆಳಿ ಹಿರಿದಾನು
ಕೋಲು ಕೋಲೆನ್ನ॥

೧೩. ಹತ್ತು ಸಾವಿರ ದಂಡನ್ನೆಲ್ಲಾ ದಿಕ್ಕುಪಾಲು ಮಾಡಿ
ಒಬ್ಬ ಸೂಳಿಗೂ ತಿಳಿಸಲಿಲ್ಲಣ್ಣ ಕಾಖಗದ ಸುದ್ದಿ

ಎಲ್ಲೆಲ್ಲಿಗೂ ನೀಲಕಲಿಲ್ಲಣ್ಣಾ

ಕೋಲು ಕೋಲನ್ನ॥

ಹೀಗೆ ಬಲ್ಲಾರಿ ಗೋಣಿ ಜರ್ಮಲೆ ದಂಡಿಗೆ ಸಾಧ್ಯವಾಗದ ನಾಗೇನಹಳ್ಳಿ ದಂಡನ್ನು ಒಬ್ಬನೇ ಹೋರಾಡಿ ಸೋಲಿಸಿದ. ತನ್ನ ವಿಜಯದ ಸಂಕೇತವಾಗಿ ಅಲ್ಲಿಯ ದೇವಸ್ಥಾನದ ಪಲ್ಲಕ್ಕಿಯನ್ನು ಹೊತ್ತು ತರುತ್ತಾನೆ. ಅದನ್ನು ಹೊರಾಲು ಅನಿಕೆಗಾಗಿ ಅಲ್ಲಿಯೇ ಬೆಳೆದ ಹೊನ್ನಿ ಗಿಡದ ಬೇರನ್ನೆ ತೆಗೆದುಕೊಂಡು ಆ ಪೆಳೆಯಲ್ಲಿ ಒಬ್ಬ ಕೋವಿಕಾರ ಹೊಂಚುಹಾಕಿ ಕುಂತಿರುವುದನ್ನು ಬಲ್ಲಾರಿ ಗೋಣ್ಯ ಸೂಕ್ಷ್ಮ ದೃಷ್ಟಿಯಿಂದ ಗುರುತಿಸಿ ಆ ಕೋವಿಕಾರನನ್ನು ಕುರಿತು,

**ಬಲ್ಲಾರಿ ಗೋಣ್ಯನ ಮರಣ :**

೧೪. ಯಾವ ಸೀಮೆ ಹಣೆಯಣ್ಣಾ ಯಾವ ಭೂಮಿ ಹಣೆಯಣ್ಣಾ

ಸೀಗಿಯಾ ಪೆಳೆಯಾಗೆ ಆಡಗ್ಯಾನು ಕೋವಿಯ ಗೆಳೆಯ

ಲೆಕ್ಕಿಯ ಪೆಳೆಯಾಗೆ ಅಡಗ್ಯಾನು

ಎಂದು ಪೆಳೆಯಲ್ಲಿ ಅಡಗಿದ್ದ ಕೋವಿಕಾರನನ್ನು ಮಾತನಾಡಿಸಿ ಜೊತೆಯಲ್ಲಿ ಹೋಗಾಣ ಬಾ ಎಂದು ಕರೆಯುತ್ತಾನೆ. ಅದಕ್ಕೆ ಕೋವಕಾರ ಕೈಯಲ್ಲಿರುವ ಆಯುಧವನ್ನು ತೆಗೆದು ಹಾಕಿದರೆ ಬರುವನೆಂದು ಹೇಳುತ್ತಾನೆ. ಅನಂತರ ಗೋಣಿ ಅದನ್ನು ಜನ್ಮ ಹೋಗುವವರೆಗೂ ತೆಗೆದುಕೊಳ್ಳುವುದಿಲ್ಲವೆಂದು ಹೇಳಿದ ಬಾಯಿಯೊಳಗಿನ ಮಾತು ಬಾಯಿಯೊಳಗೆ ಇದ್ದಂತೆ ಕೋವಿಕಾರ ಕೋವಿಯಿಂದ ಹೊಡೆದ. ಬಲ್ಲಾರಿ ಗೋಣ್ಯಗೆ ಗುಂಡು ತಾಕಿತು. ರಕ್ತ ಹರಿಯುತು. ಗೋಣ್ಯನ ಗೆಳೆಯ ಶಿವಲಿಂಗನಿಗೆ ಕೋವಿಯ ಶಬ್ದ ಕೇಳಿ,

೧೫. ಗುಂಡು ಹಾರಿದ ಶಬ್ದವನ್ನು ಯಾರು ಯಾರು ಕೇಳ್ಯಾರಣ್ಣ

ಜೀವ ಜೀವನದ ಗೆಳೆಯಾನು, ಶಿವಲಿಂಗ ಗೆಣಿಯಾ

ಪ್ರಾಣ ಜೀವದ ಗೆಳೆಯಾನು

**ಗೋಣ್ಯಾಯನ್ನು ಕುರಿತು :**

೧೬. ನಿನ್ನ ಹೊಡೆದವನ ಗುರುತು ಹೇಳಣ್ಣಾ ಬಲ್ಲಾರಿ ಗೋಣ್ಯಾ

ನಿನ್ನ ಹೊಡೆದವನ ಗುರುತು ಹೇಳಣ್ಣಾ॥

ಅದಕ್ಕೆ ಗೋಣಿಯ ಉತ್ತರ

೧೭. ನಿಲುವಂಗಿ ತೊಟ್ಟಾನ ನೀಲಗುದರಿಯಿಂದ್ಹಾರ್‍ಯಾನ

ಬೆಳ್ಳಿ ಕಟ್ಟಿ ಕೋವಿಕಾರನು

ಕೋಲು..ರ..ಕೋ.ಸಿರಿ.ಗಂ.ಕೋಲೆ॥

ಇಷ್ಟು ಹೇಳುತ್ತಿದ್ದಾಗ ಕೋವಿಕಾರ ಕುದುರೆ ಮೇಲೆ ಐದು ಗಟ್ಟದ ಹೋಗಿದ್ದ ಶಿಲಿಂಗ ಗೋಣಿಯ ನಾಗಲೋಟದಲ್ಲಿ ಓಡಿ ಅವನನ್ನು ಹಿಡಿದು ತಂದ. ಬಲ್ಲಾರಿ ಗೋಣಿಗೆ ಕೋವಿಕಾರನನ್ನು ಕೋವಿನಿಂದ ಕೊಲ್ಲಲು ಸೂಚಿಸಿದ ಅದಕ್ಕೆ ಬಿಲ್ಲಾ ಗೋಣಿ ಹೀಗೆ ಹೇಳಿದ,

೧೮. ಓಡಿಹೋದ ಹೇಡಿ ಅವನು ಅವನ ಮೇಲೆ ಕೈಮಾಡೋದಿಲ್ಲ

ನಿನ್ನ ಕೈಲಿ ನಿನ್ನ ಬುದ್ಧಿಶ್ಯಪ್ಪಾ ಶಿವಲಿಂಗ ಗೆಣಿಯಾ

ಕೋಲು ಕೋಲೆನ್ನ॥

೧೯. ಊರ ದೇವತೆ ಸೇವೆ ಆಗಿ ಪಟ್ಟದ ಕೋಣವನ್ನೇ ಮಾಡಿ

ಕಡಿದು ಕಡಿದು ಎಡಿಗೆ ತುಂಬಪ್ಪಾ। ಶಿವಲಿಂಗ ಗೆಣಿಯಾ

ನಿನ್ನ ಕೈಯಲ್ಲಿ ನಿನ್ನ ಬುದ್ಧಿಶ್ಯಪ್ಪಾ

ಕೋಲು ಕೋಲನ್ನ॥

ಬಲ್ಲಾರಿ ಗೋಣಿಗೆ ಕೋವಿ ಹೊಡಿತದ ನೋವು ಜಾಸ್ತಿಯಾತ್ತು. ಪರಲೋಕದ ಕಡೆಗೆ ತನ್ನಾತ್ಮವನ್ನು ನೆಲೆಗೊಳಿಸಿ ಇಹಲೋಕದ ಅಂತ್ಯಕ್ರಿಯೆಗೆ ಶಿವಲಿಂಗ ಗೆಣಿಯನ್ನು ಅಣಿ ಮಾಡಲು ಹೇಳಿದ.

೨೦. ಗಾಯವಾದರೂ ಸೊಕ್ಕಿ ಬಂತು ಬಾಯನಂದರೂ ತೆಗೆಯಲಾದೆ

ಸಿರಿಗಂಧದ ಸೆಕ್ಕೆ ಕಡಿದು ಅಗ್ನಿ ದೇವತೆ ಮಾಡಿದನ್ನ

ಅಗ್ನಿಯೊಳ್ ಒಂದಿಷ್ಟು ಇಟ್ಟು ಬಿಡಣ್ಣಾ

ಕೋಲು...ರ..ಕೋ..ಸಿಂ.ಗಂ. ಕೋ॥

ತನ್ನ ಸ್ನೇಹಿತನ ಅಭೀಷ್ಟದ ಮೇರಿಗೆ ಶಿವಲಿಂಗ ಗೆಣಿಯ ಸಿರಿಗಂಧದ ಚಿತೆ ಮಾಡಿದ. ಅದರಲ್ಲಿ ಗೋಣಿಯ ಪಾರ್ಥಿವ ಶರೀರವನ್ನು ಇಟ್ಟು ಬೆಲೆಕೊಟ್ಟು ಬಲ್ಲಾರಿ ಗೋಣಿಯ ಬಾರನ್ನು ತನ್ನ ನಡುವಿನಲ್ಲಿ ಸಿಕ್ಕಿಸಿಕೊಂಡು ಹೊರಟ. ಆಗ ಬಲ್ಲಾರಿ ಗೋಣಿಯ ಕತ್ತಿ ಈ ರೀತಿ ಹೇಳಿತು.

೨೧. ಕಳ್ಳರ ಹಿಡಿಯುವ ಕತ್ತಿಯಲ್ಲಿ ಸುಳ್ಳೆರಿಡಿಯುವ ಕತ್ತಿಯಲ್ಲ

ಕಿಚ್ಚಿನೊಳ್ ಹಾಕಿ ಬಿಡಣ್ಣಾ ಶಿವಲಿಂಗ ಹೆಣಿಯಾ

ಕೋಲು ಕೋಲು ಕೋಲನ್ನ ಕೋಲೆ॥

ಇಂಥಾ ಕತ್ತಿ ಹೋದ ಮೇಲೆ ಇಂಥ ಗೆಣಿಯ ಹೋದ ಮೇಲೆ ನಾನಿದ್ದು ಸಾರ್ಥಕವೇನಣ್ಣ. ಭೂಮಿಯ ಮೇಲೆ ನಾನಿದ್ದು ಸಾರ್ಥಕವೇನಣ್ಣ ಎಂದು ಬಲ್ಲಾರಿ ಗೋಣಿಯ ಕತ್ತಿಯೊಂದಿಗೆ ಚಿತೆಯೊಳಗೆ ಹಾರಿದ ಆಗ ಮೇಲೆ ಮಳೆರಾಯ ಕಣ್ಣು ತೆರೆದು ನೋಡಿ,

೨೨. ಮಾಯಾದಾ ಮಳೆಗಾಳ ಸುರಿಸ್ಯಾನು ಪರಮಾತ್ಮ
ತಾನು ಮಾಯಾದ ಮಳೆಗಳ ಸುರಿದಾನು॥

**ಗೋಣ್ಯನ ಕೊಂದ ಕೋವಿಕಾರನ ಮನ ಪರಿವರ್ತನೆ :**

ಕೋವಿಕಾರನಿಗೆ ಈ ದೃಶ್ಯ ತುಂಬಾ ಪರಿಣಾಮ ಬೀರಿತು. ಬಲ್ಲಾರಿ ಗೋಣ್ಯನು ಬಗ್ಗೆ ಗೌರವ ಭಾವ ಮೂಡಿತು.

೨೩. ನೀವೇ ತಾಯಿ ತಂದೆ ನೀವೇ ಬಂಧು ಬಳಗ
ನಿಮ್ಮ ಹಿಂದೆ ನಾನು ಬರುತ್ತಿನೊ ಬಲ್ಲಾ ಗೋಣ್ಯ
ನಿಮ್ಮ ಹಿಂದೆ ನಾನು ಬರುತ್ತಿನೊ॥

ಪ್ರತ್ಯುತ್ತರವಾಗಿ ಈ ಕೆಳಕಂಡಂತೆ ಉತ್ತರವನ್ನು ಹಾಡಿನ ರೂಪದಲ್ಲಿ ಕೊಡಲಾಗಿದೆ.

ಅಂದ ಮಾತು ಕೊಂದ ಕೊಲೆ ಎಂದೆಎಂದುಗೂ
ತಪದಯ್ಯ ನಮ್ಮ ಹಿಂದೆ ನೀನು ಬರಬ್ಯಾಡೋ
ಕೋವಿ ಗೆಳೆಯ ಬೆಳೆಗಿದರೊಮ್ಮೆ ಕಾಳಗ ವಿರಲಣ್ಣಾ

ಎಂದು ಹೇಳುತ್ತಾನೆ.

**೩.೩. ಗಾದೆ-ಒಗಟುಗಳು :**

ಭಾಷೆ ಮನುಷ್ಯನಿಗೆ ಒಂದು ದೊಡ್ಡ ವರ. ಭಾಷೆಯ ಮೂಲಕವೇ ಅವನು ತನ್ನ ಸಕಲ ವ್ಯವಹಾರ ಸಾಗಿಸುತ್ತಾನೆ. ಭಾಷೆಯ ಸಹಾಯವೊಂದು ಇಲ್ಲದಿದ್ದರೆ ಈ ಜಗತ್ತಿನ ಸಕಲ ವ್ಯವಹಾರ ಅಂಧಕಾರದಲ್ಲಿ ಮುಳುಗುವುದೆಂದು ಬಲ್ಲವರು ಹೇಳಿದ್ದಾರೆ. ಪ್ರಪಂಚದಲ್ಲಿ ಅನೇಕ ಸಾವಿರ ಭಾಷೆಗಳುಂಟು. ಜನರು ತಮ್ಮ ತಮ್ಮ ಭಾಷೆಗಳಲ್ಲಿ ತಮ್ಮ ದೈವದಿಂದ ವ್ಯವಹಾರ ಸಾಗಿಸುತ್ತಾರೆ. ಆಯಾ ಭಾಷೆಗಳ ಸೊಗಸು ಜಾಯಮಾನಗಳನ್ನು ತಾವು ದೊಡ್ಡವರಾಗುತ್ತ ಹೊದಂತೆ ಕಲಿಯುತ್ತಾರೆ. ನಮ್ಮ ಜಾನಪದರು ಎಷ್ಟು ಜನ ಅನಕ್ಷರಸ್ಥರು ಆದರೂ ಅವರ ಭಾಷೆ, ಪ್ರೌಢಿಮೆ, ಭಾಷೆಯ ಗತ್ತು ಕಥೆಯನ್ನು ಸಾಂದರ್ಭಿಕವಾಗಿ ಹೇಳಿ ಜೀವಂತಿಕೆಯನ್ನು ತುಂಬುವುದು ನಂತರ ಮದುವೆ ಸಮಾರಂಭಗಳಲ್ಲಿ ಅಥವಾ ರೈತಾಪಿ ಕೆಲಸಗಳ ಸಂದರ್ಭದಲ್ಲಿ

ಕುಳಿತು ಹರಟೆ ಹೊಡೆಯುವಾಗ ಗಾದೆ, ಒಗಟುಗಳು ಹೇಳುವುದು, ಕೇಳುವುದು, ವಿಚಾರಿಸುವುದು, ಚರ್ಚೆ ಮುಂತಾಗಿ ಈ ರೀತಿಯ ಸಂಪ್ರದಾಯ ಆಚರಣೆಗಳು ಉಜ್ಜನಿ ಗ್ರಾಮದಲ್ಲಿ ವಿಶಿಷ್ಟವಾಗಿ ಜನರ ಬಾಯಿಯಲ್ಲಿ ಉಳಿದುಕೊಂಡಿವೆ.

ಈ ರೀತಿ ಗಾದೆಗಳು, ಒಗಟುಗಳು ಒಂದೇ ನಾಣ್ಯದ ಎರಡು ಮುಖಗಳೆಂದು ಹೇಳಬಹುದು. ಅಂದರೆ ಒಗಟು ಮತ್ತು ಗಾದೆಗಳಿಗೆ ಕೆಲವು ಅಂಶಗಳಲ್ಲಿ ತೀರ ಹತ್ತಿರದ ಸಂಬಂಧವುಂಟು. ಹೀಗಿದ್ದರೂ ಅವುಗಳಲ್ಲಿ ಸಾಮ್ಯ ವೈಷಮ್ಯಗಳು ಉಂಟು. ಒಗಟು ಅದೇ ಕಾಲದಲ್ಲಿ ಗಾದೆಯಂತೆಯೂ ನಡೆಯಬಲ್ಲದು. ಆದರೆ ಗಾದೆ ಒಗಟಿನ ರೂಪ ಧರಿಸಲು ಶಕ್ಯವಿಲ್ಲ. ಗಾದೆಗೆ ವ್ಯಾಖ್ಯಾನ ಅಥವಾ ವಿವರಣೆ ಮುಖ್ಯವಾದದ್ದು. ಆದರೆ ಒಗಟಿಗೆ ಅದರ ಉತ್ತರ ಮಾತ್ರ ಮುಖ್ಯ. ಗಾದೆ ಅನುಭವದ ಖನಿಯಿದ್ದಂತೆ ಆದರೆ ಒಗಟಿಗೆ ರಹಸ್ಯವಾಗಿ ಹೇಳುವ ಕ್ರಿಯೆ ಮಾತ್ರ ಮುಖ್ಯ. ಗಾದೆ ವಿಶೇಷತಃ ಭಾವಕ್ಕೆ ಸಂಬಂಧಿಸಿದರೆ ಒಗಟು ಬುದ್ಧಿಗೆ ಸಂಬಂಧಿಸಿದ್ದು. ಈಗ ಒಗಟು ಗಾದೆಯೂ ಆಗಬಲ್ಲದೆಂಬುವುದಕ್ಕೆ ಎರಡು ಉದಾಹರಣೆ:

ಚಿಕ್ಕಕ್ಕನಿಗೆ ಮುಕ್ಕುದ್ದು

ಚೋಟುದ್ದ ಹುಡುಗಿಗೆ ಮಾರುದ್ದ ಜಡೆ

ಈ ಎರಡು ಒಗಟುಗಳ ಉತ್ತರ ಸೌಟು ಅಥವಾ ಸೂಜಿ–ದಾರ, ಹಾಗಾದರೆ ಇವು ಗಾದೆಯೆಂದು ಎನಿಸುವುದು ಹುಡುಕಿದರೆ ಕೆಲವು ಒಗಟುಗಳು ಗಾದೆಗಳಾಗಿಯೂ ದೊರೆಯಬಲ್ಲವು.

**ಗಾದೆಗಳು :**

"ಹಂಪೆಯನ್ನು ಹೊರಗೆ ನೋಡು ಉಜ್ಜನಿ ಒಳಗೆ ನೋಡು", ತುಂಬಿದ ಕೊಡ ತುಳುಕುವುದಿಲ್ಲ

೧. ಹುಟ್ಟಿದ ದೇವರು ಹುಲ್ಲು ಮೇಯಿಸುತ್ತಾನೆಯೇ

೨. ಹೊಟ್ಟೆಗೆ ಹಿಟ್ಟಿಲ್ಲಂದ್ರೆ ಜುಟ್ಟಿಗೆ ಮಲ್ಲಿಗೆ ಹೂವು

೩. ನೇವ್ವರನ ಹೆಂಡ್ರಿ ಬೆತ್ಲೆ

೪. ಕರೆ ಗಯ್ಯಾಳಿಗೆ ಪಿರಿತನ ಕೊಟ್ರೇ ಕೆರೆ ಮೇಲೆ ಹೋಗಿ ಕೇಕೆ ಹೊಡದ್ಲಂತೆ

೫. ಉಗಾದಿತಂಕ ಬರೆಕೋ ಉಗಾದಿ ಆದಮ್ಯಾಲೆ ಹರಕೋ

೬. ಇದ್ದದ್ದು ಇದ್ದಾಂಗ ಹೇಳಿದರೇ ಎದ್ದು ಬಂದು ಎದಿಗೆ ಒದ್ದಂತೆ

ಈ ರೀತಿ ಗಾದೆಗಳು ಉಜ್ಜನಿ ಪರಿಸರದಲ್ಲಿ ಕಂಡುಬರುತ್ತವೆ. ಈ ಎಲ್ಲಾ ಮಾತುಗಳು ಅನುಭವದ ವಾಣಿಗಳು ಆಗಿದ್ದಾವೆ.

**ಒಗಟುಗಳು :**

ಒಗಟು ಎಂದರೆ ಒಂದು ವಸ್ತುವನ್ನು ಬೇರೊಂದು ವಸ್ತು ಅಥವಾ ವಿಷಯದೊಡನೆ ಗುಪ್ತವಾಗಿ ರಹಸ್ಯವನ್ನು ಹುಡುಕಲು ಹೇಳುವ ಒಂದು ಕ್ರಮ. ಈ ಕ್ರಮ ಪ್ರಶ್ನೆ ರೂಪದಲ್ಲಿ ಇರುತ್ತದೆ. ಒಗಟಿನಲ್ಲಿ ಎರಡು ಸದೃಶ್ಯ ವಸ್ತುಗಳಿರಬೇಕು. ಒಂದು ಉಪಮಾನ ಇನ್ನೊಂದು ಉಪಮೇಯ. ಒಗಟಿನಲ್ಲಿ ಉಪಮಾನ ವಾಚ್ಯವಾಗಿರುತ್ತದೆ. ಉಪಮೇಯ ಅಸ್ಪಷ್ಟವಾಗಿ ರಹಸ್ಯವಾಗಿರುತ್ತದೆ. ಉಪಮಾನದ ಆಧಾರದಿಂದ ಉಪಮೇಯವನ್ನು ಹುಡಕಬೇಕಾಗುತ್ತದೆ. ಆದ್ದರಿಂದ ಒಗಟು ಬುದ್ಧಿಶಕ್ತಿಯ ಪರೀಕ್ಷೆಗೆ ಒಂದು ಒಳ್ಳೆಯ ಓರೆಗಲ್ಲು. ಇಂತಹ ಒಗಟುಗಳು ಜನರ ಒಂದು ಉತ್ತಮ ಸಾಹಿತ್ಯಗಳಾಗಿ ಉಳಿದುಕೊಂಡು ಬಂದಿವೆ. ಇಂತಹ ಒಗಟುಗಳು ಉಜ್ಜಿನಿ ಗ್ರಾಮದಲ್ಲಿಯೂ ಜನ ಜನಿತವಾಗಿದೆ.

ಬಂಗಾರದ ಮೇಜು ಬೆಳ್ಳಿ ಟಾಕು

ಮಠದಾಗ ಕುತುಕೊಂಡು ಆಶೀರ್ವಾದ ಮಾಡ್ತದೆ

ಉಜ್ಜಿನಿ ಗುರುಗಳು

ದನ ಕಾದನಾ ಆಳಾಗಿ ದುಡಿದಾನ

ದೇಸಕ್ಕ ಅರಸನಾಗಿ ಮೆರುದು

ಗುಡಿಯ್ಯಾಗ ಕುಂತಾನ ಸಿದ್ಧಪ್ಪ

ಈ ಒಗಟು ಶ್ರೀ ಮರುಳಸಿದ್ಧನ ಜೀವನ ವೃತ್ತಾಂತವನ್ನು ಸಾರುತ್ತದೆ.

ಅಕ್ಕಿ ನುಟ್ಟ ಬೆಳ್ಳಿ ಕುಚ್ಚು

ಸೂಳೇರ ಮ್ಯಾಲೆ ಬಲು ಹುಚ್ಚು

ನಾಗಪ್ಪ ಧಣಿಯರು

ಎಂದು ಹಾಡನ ಗುಣಗಳನ್ನು ಅರಿತ ಹೆಂಡತಿ ಒಗಟಿನ ರೂಪದಲ್ಲಿ ಹೇಳುತ್ತಾಳೆ.

**೩.೪. ನಂಬಿಕೆಗಳು :**

**ಮಳೆಗಾಗಿ ದಂಡಯಾತ್ರೆ :**

ಉಜ್ಜಿನಿ ಇತಿಹಾಸ ಎಷ್ಟು ರೋಚಕವೋ ಊರಿನೊಳಗಿನ ಜನಪದರ ಆಚರಣೆ, ಸಂಪ್ರದಾಯ, ಪದ್ಧತಿಗಳೂ ಅಷ್ಟೇ ಕುತೂಹಲ ಮೂಡಿಸುತ್ತವೆ. ಭರತ ಹುಣ್ಣಿಮೆಯ ದಂಡಯಾತ್ರೆ ಮಳೆ ಬೇಗ ತರಲು ಬೀಜಯಾತ್ರೆಯು ಇಂದಿಗೂ ಜನರ ಭಕ್ತಿಗೆ ಸಾಕ್ಷಿ ಅಥವಾ ಜನಾಕರ್ಷಣೆಗೆ ಕಾರಣವಾಗಿದೆ.

"ಮಳೆ ಬೀಗ" ತರುವ ಸಂಪ್ರದಾಯ ಉಜ್ಜಿನಿಯಲ್ಲಿ ಜರುಗುತ್ತದೆ. ಇದೊಂದು ವಿಶಿಷ್ಟವಾದ ಪದ್ಧತಿ. ಒಂಬತ್ತು ಜನ ಆಯಗಾರರು ಬುತ್ತಿಗಂಟು ಹೆಗಲಿಗೊಂದು ಕಂಬಳಿ, ಕೈಯೆಲೊಂದು ಬೆತ್ತ ಹಿಡಿದು ಕುಳಿತುಕೊಳ್ಳುತ್ತಾರೆ. ಇವರಿಗೆ ಮಳೆ ಬೀಗ ತರುವ ಕಾತರ. ಐದು ವರ್ಷಕ್ಕೊಮ್ಮೆ ಮಳೆ ಬೀಗ ತರುವವರನ್ನು ಬಿಳ್ಕೊಡಲು ಉಜ್ಜಿನಿ ಪೀಠದ ಜನರು ಸಿದ್ಧವಾಗಿ ನಿಂತಿರುತ್ತಾರೆ.

ಮಳೆ ಬೀಗ ಇರುವುದು ಉಜ್ಜಿನಿಯಲಿಲ್ಲ. ಇಲ್ಲಿಂದ ಸುಮಾರು ೧೦೦ ಕಿ.ಮೀ. ದೂರದ 'ಸಂದೋಗಿ' (ಕೊಪ್ಪಳ ಜಿಲ್ಲೆ)ಯಲ್ಲಿ ಆಯಾಗಾರರಲ್ಲಿ ವರ್ಣ ಬೇಧವಿಲ್ಲ. ಇವರಲ್ಲಿ ಮಡಿವಾಳ, ನಾಯಕರು, ಕುರುಬರು, ಚಲವಾದಿಗಳು, ಕೊರವರು ಇರುತ್ತಾರೆ. ಇಲ್ಲಿ ಮಾನವರೆಲ್ಲ ಒಂದೇ ಎಂಬ ತತ್ವ ಗುಂಪಿನ ಪ್ರಮುಖನಿಗೆ ವಿಭೂತಿ ಹುಂಡಿಗಳನ್ನು ಅರ್ಪಿಸುತ್ತಾರೆ. ಪವಿತ್ರವಾದ ಕರಿ ಶಿಖರದ ಮೇಣದ ಹುಂಡಿ ಕೊಡಲಾಗುತ್ತದೆ. ನಂತರ ಅಚ್ಚು ಹೊಸ ಕರಿ ಕಂಬಳಿ ನೀಡಲಾಗುತ್ತದೆ. ಆಯಗಾರರಿಗೆ ಶ್ರೀ ಪೀಠ ಮತ್ತು ಗ್ರಾಮಸ್ಥರು ಕೆಲ ಷರತ್ತುಗಳನ್ನು ವಿಧಿಸುತ್ತಾರೆ. ಇದು ನಿಷ್ಠೆಯಿಂದ ಜರಗುವ ಪಾದಯಾತ್ರೆ. ಯಾರು ಚಪ್ಪಲಿ ಮೆಟ್ಟಬಾರದು, ಯಾವ ಕಾರಣಕ್ಕೂ ಗ್ರಾಮದ ಮಧ್ಯೆ ಹಾಯುವಂತಿಲ್ಲ, ಪರರ ಸಂಗಡ ಮಾತನಾಡುವಂತಿಲ್ಲ, ಅವರವರ ಮಧ್ಯದಲ್ಲಿ ಮಾತ್ರ ಸಂಭಾಷಣೆ ನಡೆಸಬಹುದು. ಮಾರ್ಗ ಮಧ್ಯದಲ್ಲಿ ಇವರಿಗೆ ತೊಂದರೆಯಾಗಬಾರದೆಂದು ಶ್ರೀ ಪೀಠ ಪತ್ರ ಬರೆದುಕೊಟ್ಟಿರುತ್ತಾರೆ. ಈ ಪತ್ರದೊಂದಿಗೆ ಊರ ಗ್ರಾಮ ಪಂಚಾಯತಿಗೆ ಪೊಲೀಸ್ ಠಾಣೆ, ತಹಸೀಲ್ದಾರರು ಕೊಟ್ಟ ಪತ್ರಗಳು ಇರುತ್ತವೆ. ಪೂರ್ವ ಕಾಲದಿಂದಲೂ ನಡೆದುಬಂದ 'ಮಳೆ ಬೀಗ' ತರುವ ಪದ್ಧತಿ ಗೊತ್ತಿರುವುದರಿಂದ ಇವರನ್ನು ಕಂಡೊಡನೆ ಪೂಜ್ಯ ಭಾವನೆಯಿಂದ ದಾರಿಬಿಟ್ಟು ಸರಿಯುತ್ತಾರೆ.

ಶ್ರೀ ಪೀಠದಿಂದ ಶನಿವಾರವೇ ಹೊರಡಬೇಕೆಂಬ ಪದ್ಧತಿ. ಭಾನುವಾರ ರಾತ್ರಿ ಮಳೆ ಬೀಗ ತರುವ ತಂಡ ಸಿಂದೋಗಿ ತಲಪುತ್ತಾರೆ. ಗ್ರಾಮಸ್ಥರು ಸ್ವಾಗತಿಸಿ ಮೆರವಣಿಗೆಯಲ್ಲಿ ಮರುಳಸಿದ್ಧಪ್ಪನ ಗುಡಿಗೆ ಕರೆತರುತ್ತಾರೆ. ಇಲ್ಲಿ ಉಜ್ಜಿನಿ ಸದ್ಧರ್ಮ ಪೀಠದ ಶಾಖಾಮಠ ಇಲ್ಲಿದೆ. ಮಳೆ ಮಲ್ಲಿಕಾರ್ಜುನ ಜಗದ್ಗುರುಗಳ ಗದ್ದುಗೆ ಇದೆ. ನೂರಾರು ವರ್ಷಗಳ ಹಿಂದೆ ಪೂಜ್ಯರು ಉಜ್ಜಿನಿ ಪೀಠದ ಜಗದ್ಗುರುಗಳಾಗಿದ್ದವರು, ವೀರಶೈವ ಧರ್ಮ ಪ್ರಚಾರಕ್ಕೆ ಶ್ರೀಗಳು ಸಂಚರಿಸುತ್ತಾ ಸಿಂದೋಗಿಗೆ ಬಂದರಂತೆ. ಶ್ರೀಗಳವರು ಸಿಂದೋಗಿಯಿಂದ ಮರುಳುವಾಗ ಮಳೆ ಬೀಗವನ್ನು ಮರೆತು ಬಂದರು ಎಂಬ ನಂಬಿಕೆ ಉಜ್ಜಿನಿ ಗ್ರಾಮಸ್ಥರಲ್ಲಿದೆ.

ಈ ಘಟನೆಗಳು ನಡೆದು ಶತಮಾನಗಳು ಉರುಳಿವೆ. ಅಂದಿನಿಂದಲೂ ಐದು ವರ್ಷಕ್ಕೊಮ್ಮೆ ಮಳೆ ಬೀಗ ತರುವ ಸಂಪ್ರದಾಯ ನಡೆಯುತ್ತಾ ಬಂದಿದೆ. ಇಲ್ಲಿಂದ ಒಯ್ದದ್ದ ಕಂಬಳಿಗೆ ವಿಭೂತಿಗಳನ್ನು ಅಲ್ಲಿ ಅರ್ಪಿಸುತ್ತಾರೆ. ಸೇರು ಜೋಳದ ಬೀಜ ಅದಲಿ ಬದಲಿಯಾಗುತ್ತದೆ.

ಸಿಂದೋಗಿಯನ್ನು ಆಯಗಾರರು ಸೋಮವಾರ ಬಿಟ್ಟು ಮಂಗಳವಾರ ರಾತ್ರಿ ಉಜ್ಜನಿ ತಲುಪುತ್ತಾರೆ. ಇವರನ್ನು ಜನಪದರು ಆಧರಿಸಿ ಸ್ವಾಗತಿಸುತ್ತಾರೆ. ವರುಣದೇವನ ಪ್ರತಿನಿಧಿಗಳಂತೆ ಆಯಗಾರರು ಗ್ರಾಮವನ್ನು ಪ್ರವೇಶಿಸುತ್ತಾರೆ. ಮರುದಿನ ರೈತರು ಮನೆಯಿಂದ ಸೇರು, ೨ ಸೇರು ಜೋಳ ತೆಗೆದುಕೊಂಡು ಶ್ರೀಪೀಠಕ್ಕೆ ಧಾವಿಸುತ್ತಾರೆ. ಸಿಂದೋಗಿಯಿಂದ ತಂದ ಜೋಳವನ್ನು ಮನೆಗೆ ತಂದು ಮನೆಯಲ್ಲಿ ಜೋಳದಲ್ಲಿ ಮಿಶ್ರ ಮಾಡಿಬಿಡುತ್ತಾರೆ. ಹೀಗೆ ಜೋಳದ ಬದಲಾವಣೆಯಿಂದ ಉತ್ತಮ ಬೆಳೆ ಸಕಾಲಕ್ಕೆ ಬೆಳೆ, ಅಧಿಕ ಇಳುವರಿ ಬರುತ್ತದೆ ಎಂಬುದು ಜನರ ಆಚರಣೆ, ನಂಬಿಕೆ ಅರ್ಥಗರ್ಭಿತವಾಗಿದ್ದು ಇಂದಿಗೂ ಸಂಪ್ರದಾಯವಾಗಿ ಉಜ್ಜನಿ ಗ್ರಾಮದಲ್ಲಿ ಉಳಿದಿದೆ. (ಕನ್ನಡ ಪ್ರಭ ವರದಿಯಿಂದ ದಿನಾಂಕ: ೨೮ ಶನಿವಾರ ಏಪ್ರಿಲ್ ೨೦೦೧)

**೩.೫. ಮರುಳಸಿದ್ಧೇಶ್ವರ ದೇವಾಲಯದ ಕಲೆ ಮತ್ತು ವಾಸ್ತುಶಿಲ್ಪಗಳು :**

ಮರುಳಸಿದ್ಧೇಶ್ವರ ಸ್ವಾಮಿಯ ಗುಡಿಯು ಉಜ್ಜನಿಯಲ್ಲಿರುವ ಸ್ಮಾರಕಗಳಲ್ಲಿ ಅತ್ಯಂತ ಮಹತ್ವದ ಮತ್ತು ಪ್ರಮುಖ ದೇವಾಲಯವಾಗಿದೆ. ಇದರ ಗರ್ಭಗುಡಿಯಲ್ಲಿಯೇ ಮರುಳಸಿದ್ಧೇಶ್ವ ಲಿಂಗವು ಉದ್ಭವವಾಗಿ ಇಂದಿಗೂ ಸಹ ಪ್ರತಿದಿನ ಭಕ್ತಿಯಿಂದ ಯಾತ್ರಿಕರಿಂದ ತುಂಬಿರುತ್ತದೆ.

ಈ ಗರ್ಭಗುಡಿಯ ಹೊರಭಾಗದ ಮೇಲೆ ಬಹು ದೊಡ್ಡದಾದ ಶಿಲಾಶಿಖರವು ನಂದಿ, ವೀರಭದ್ರ, ವಿನಾಯಕ, ಬ್ರಹ್ಮ ಹಾಗೂ ಇತರೆ ದೇವತಾ ವಿಗ್ರಹಗಳಿಂದ ಕೂಡಿದ್ದಾಗಿರುತ್ತದೆ. ಶಿಖರದ ಮೇಲ್ಭಾವಣಿಯ ಮೇಲೆ ಈ ಪೀಠದ ಮೊದಲ ಗೋತ್ರ ಪುರುಷನಾದ ನಂದಿಯ ವಿಗ್ರಹವು ಧರ್ಮ ಸ್ಥಾಪನೆಗಾಗಿ ತನ್ನ ನಾಲ್ಕು ಪಾದಗಳನ್ನೂರಿ ನಿಂತಿರುವುದರಿಂದ ಈ ಪೀಠಕ್ಕೆ ಸದ್ಧರ್ಮ ಪೀಠವೆಂಬ ಹೆಸರು ಬಂದಿದೆ ಎಂಬ ನಂಬಿಕೆ ಈ ಶಾಲಾ ಗೋಪುರಕ್ಕೆ ಕಳಸ ಬಂಗಾರದ್ದಾಗಿರುತ್ತದೆ. ಪ್ರತಿವರ್ಷ ವೈಶಾಕು ಶುದ್ಧ ಷಷ್ಠಿದಿನ ಸಾಯಂಕಾಲ ಜರ್ಮಲಿ ಪಾಳೆಗಾರರು ಶಿಲಾ ಗೋಪುರಕ್ಕೆ ತೈಲವನ್ನು ಕಳುಹಿಸಿ ತೈಲಾಭಿಷೇಕವನ್ನು ನೆರವೇರಿಸುತ್ತಾರೆ. ನಂತರ ಎಲ್ಲಾ ಭಕ್ತರ ತೈಲವನ್ನು ಶಿಖರಕ್ಕೆ ಎರೆಯಲಾಗುವುದು.

**ಸಹಸ್ರದಳ ಶಿಲಾ ಕಮಲ :**

ಮರುಳಸಿದ್ಧೇಶ್ವರ ದೇವಸ್ಥಾನದ ಒಳಭಾಗದ ಗರ್ಭಗುಡಿಯ ಮುಂಭಾಗದ ಅಂಕಣದ ಮೇಲ್ಭಾವಣಿಯಲ್ಲಿ ಶಿಲ್ಪ ಕಲಾಕೃತಿಗಳಿಂದ ಕೂಡಿದ ಷಟಲಿಂಗ ಚಕ್ರವೆಂಬ ಸಹಸ್ರದಳದ ಶಿಲಾ ಕಮಲವು ಕಂಡುಬರುತ್ತದೆ. ಇದು ಅಮರಶಿಲ್ಪ ಜಕಣಾಚಾರಿಯಿಂದ ನಿರ್ಮಾಣವಾಗಿದೆ ಎಂಬ ಐತಿಹ್ಯವುಂಟು. ಅಲ್ಲದೆ ಈ ಅಲಂಕಾರದಲ್ಲಿ ಜಕಣಾಚಾರ್ಯರ ಶಿಲಾ ವಿಗ್ರಹವನ್ನು ಸಹ ಇಂದಿಗೂ ನೋಡಬಹುದು. ಗರ್ಭಗುಡಿಯ ಮುಂಭಾಗದ ಅಂಕಣದ ಎಡ-ಬಲ ಗೋಡೆಯಲ್ಲಿ

೧ಳ ಸಣ್ಣ ಶಿಲಾ ಮಂಟಪದ ಗೂಡುಗಳಲ್ಲಿ ೧ಳ ಶಿಲಾ ವಿಗ್ರಹಗಳಿರುವುದು ಕಂಡುಬರುತ್ತದೆ. ಪಶ್ಚಿಮ ದ್ವಾರದ ಮೂಲಕ ಗರ್ಭಗುಡಿ ಪ್ರವೇಶ ಮಾಡುವ ಭಕ್ತರು ಮೊದಲು ಉತ್ತರಾಭಿಮುಖವಾಗಿರುವ ಪಾಪ ವಿಮೋಚನೆಯೆಂಬ (ಪಾಪ ವಿನಾಶಕ್ಕೆ) ದೇವತೆ ಶಿಲಾ ವಿಗ್ರಹದ ದರ್ಶನ ಪಡೆದು ಒಳಗೆ ಬರುತ್ತಾರೆ. ಅನಂತರ ಭಕ್ತರು ತಾವು ಮಾಡಿದ ಪಾಪ ಕೃತ್ಯಗಳಿಗೆ ವಿಮೋಚನೆ ಸಿಗಲೆಂಬುದರ ಸಂಕೇತವಾಗಿ ಈ ವಿಗ್ರಹ ಸ್ಥಾಪನೆಯಾಗಿದೆಯೆಂಬ ಪ್ರತೀತಿ ಇಂದಿಗೂ ಉಜ್ಜಿನಿ ಜನರ ನಂಬಿಕೆಯಾಗಿದೆ.

**ಚಾಲುಕ್ಯ ಶಿಲ್ಪ :**

ಉಜ್ಜಿನಿ ದೇವಾಲಯ ಚಾಲುಕ್ಯ ಹಾಗೂ ಹೊಯ್ಸಳ ಶಿಲ್ಪಕಲೆಯ ಮಾದರಿಯಾದ್ದಾಗಿರುತ್ತದೆ. ದೇವಾಲಯದ ಗರ್ಭಗ್ರಹ ಮತ್ತು ಅವುಗಳ ಮೇಲೆ ಮೂಡಿದ ಶಿಖ ಇವನ್ನು ಒಟ್ಟಿಗೆ ವಿಮಾನ ಎಂದು ಕರೆಯುವರು. ಗರ್ಭಗೃಹದ ಮುಂದಿನದೇ ಅನೇಕ ಕಂಬಗಳಿಂದ ಕೂಡಿದ ರಂಗಮಂಟಪ (ನವರಂಗ) ಗರ್ಭಗೃಹಕ್ಕೂ ರಂಗಮಂಟಪವನ್ನು ಸೇರಿಸುವ ಮಧ್ಯದ ಮಂಟಪವನ್ನು 'ಸುಕನಾಸಿ' ಎಂದು ಕರೆಯುವರು. ಇದು ಪೂಜಾದಿ ಪರಿಕರಗಳಿಗೆ ಅನುಕೂಲವನ್ನು ಕಲ್ಪಿಸುವುದು ಈ ದೇವಸ್ಥಾನ ಪ್ರಾಚೀನ ಚಾಲುಕ್ಯ ದೇವಸ್ಥಾನವನ್ನು ಹೋಲುವಂತಿದೆ. (ಐಹೋಳೆಯ ಲಾಡಖಾನ್ ದೇವಾಲಯ) ಇಲ್ಲಿನ ಮುಖ್ಯ ಸ್ವರೂಪವೆಂದರೆ ಚೌಕವಾಗಿರುವ ಕಲ್ಲು ಕಂಬಗಳು ಅವುಗಳಿಗೆ ಸುರಳಿಕಾರದ ಚಾಚು ಪೀಠಗಳಿಂದ ಕೂಡಿದ ಬೋಧಿಗಳಿವೆ. ಕಂಬದ ಮೇಲೆ ಶೈವ ಸಂಪ್ರದಾಯದ ಅಲಂಕಾರ ಚಿತ್ರಗಳನ್ನು ಕೆತ್ತಲಾಗಿದೆ. ದೇವಾಲಯದ ಗೋಡೆಗಳು ಅಷ್ಟಾಗಿ ಅಲಂಕೃತವಾಗಿಲ್ಲ.

**ಹೊಯ್ಸಳ ಶಿಲ್ಪ :**

'ರೀ' ಎಂಬ ವಿದ್ವಾಂಸರು ಹೊಯ್ಸಳ ಶಿಲ್ಪದ ಬಗ್ಗೆ ಈ ರೀತಿ ಹೇಳುತ್ತಾರೆ. ಹೊಯ್ಸಳ ವಾಸ್ತು ರೀತಿಯ ದೇವಾಲಯಗಳ ವಿನ್ಯಾಸ ರೂಪ ಆಕಾರಗಳಲ್ಲಿಯೂ ವಾಸ್ತುವಿನ ಭಾವ ಪ್ರೇರಣೆಗಳಲ್ಲಿ ರಚನಾ ಚಾತುರ್ಯದಲ್ಲೂ ಚಾಲುಕ್ಯ ಶೈಲಿಯನ್ನೇ ಮುಂದುವರಿಸಿಕೊಂಡು ಬಂದಿದೆ. ಹೊಯ್ಸಳರ ದೇವಾಲಯಗಳು ನಕ್ಷತ್ರಾಕೃತಿಯವು. ಚಿನ್ನ, ಬೆಳ್ಳಿಯ ಸೂಕ್ಷ್ಮ ಕೆತ್ತನೆ ಕೆಲಸಗಳಿಗಿಂತ ಇಲ್ಲಿಯ ಕೆತ್ತನೆಗಳು ಸೊಗಸಾಗಿವೆ. ದೇವಾಲಯ ಶಿಲ್ಪ ಕೆತ್ತನೆಯ ಮಹತ್ವ ವಿನ್ಯಾಸಕ್ಕಿಂತ ಅವುಗಳ ಪ್ರಮಾಣದಲ್ಲಿದೆ. ಹೊಯ್ಸಳ ಶಿಲ್ಪ ಕೆತ್ತನೆಗೆ ಬಳಸಿದ ಶಿಲೆ ಮೃದುವಾದ ಕಪ್ಪನೆಯ ಕಲ್ಲು (ಬಳಸಿದ ಶಿಲೆ) ಉಜ್ಜಿನಿ ದೇವಾಲಯವನ್ನು ಪರಿಶೀಲಿಸಿದರೆ ಚಾಲುಕ್ಯ ಹಾಗೂ ಹೊಯ್ಸಳ ಶಿಲ್ಪ ಸಂಗಮವನ್ನು ನಾವು ನೋಡಬಹುದು. ಇದು ಅವರ ಇಬ್ಬರ ಬಾಂದವ್ಯದ ಸಂಕೇತವಾಗಿದೆ. ಹೊಯ್ಸಳ ಶಿಲ್ಪ ಜಕಣಾಚಾರಿಯನ್ನು ಬೀಗದ ಕೆಲಸಕ್ಕಾಗಿ (ಚಾಲುಕ್ಯ ಸಾಮಂತ

ಇರುವಕ್ಕವೇಲ) ಹೊಯ್ಸಳರ ಅರಸ ಉಜ್ಜನಿಗೆ ಕಳಿಸಿರಬೇಕು ಎಂಬ ಅಭಿಪ್ರಾಯವಿದೆ. ಈ ದೇವಾಲಯದ ಕಲ್ಲಿನಿಂದ ಜಕಣಾಚಾರಿ ತಾನು ಕಂಡ ಸಾಕ್ಷಾತ್ಕಾರದ ಭವ್ಯತೆಯನ್ನು ಮೂಡಿಸಿರಬೇಕು.

ಹೀಗಾಗಿ ಈ ದೇವಾಲಯ ೧೦-೧೧ನೇ ಶತಮಾನದ ಮಧ್ಯದಲ್ಲಿ ಕಟ್ಟಲಾಗಿರುತ್ತದೆ. ಮರುಳಸಿದ್ಧೇಶ್ವರ ದೇವಾಲಯದ ಸ್ಥಾಪನೆಯಿಂದಲೆ ಸಿಂಹಾಸನ ಸ್ಥಾಪನೆ ಸುಮಾರು ೧೦-೧೧ನೇ ಶತಮಾನವೆಂದು ಭಾವಿಷುವುದು ಸೂಕ್ತ ಎಂದು ಹೇಳಿ "ಹಂಪೆ ಹೊರನೋಡು ಉಜ್ಜನಿ ಒಳನೋಡು" ಎಂಬ ಗಾದೆ ಮಾತು ಇಲ್ಲಿನ ಶಿಲ್ಪಕಲೆ ಮತ್ತು ವಾಸ್ತುಶಿಲ್ಪದ ಮೇಲೆ ಬೆಳಕನ್ನು ಹರಿಸುತ್ತದೆ.

**ಅಡಿ ಟಿಪ್ಪಣಿ**

೧. ಕರ್ನಾಟಕದ ಕೈಫಿಯತ್ತಗಳು

೨. ಉಜ್ಜನಿ ಸದ್ಧರ್ಮ ಪೀಠದ ಸಾಂಸ್ಕೃತಿಕ ಅಧ್ಯಯನ

೩. ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

೪. ಈ ಮಾಹಿತಿಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿ.ಮ. ವೀರಭದ್ರಯ್ಯ ಮತ್ತು ಉಜ್ಜನಿ ಜನರಿಂದ ಸಂಗ್ರಹಿಸಲಾಗಿದೆ.

## ಅಧ್ಯಾಯ – ನಾಲ್ಕು

# ಉಜ್ಜನಿಯ ಗ್ರಾಮೀಣ ಬದುಕು

### ೪.೧. ಸಾಮಾಜಿಕ ವ್ಯವಸ್ಥೆ :

ಮನುಷ್ಯನು ಬೌದ್ಧಿಕ ಹಾಗೂ ಭಾವನಾತ್ಮಕ ಅವಶ್ಯಕತೆಗಳಿಗನುಗುಣವಾಗಿಯೇ ಸಮಾಜ ರಚನೆ ಮಾಡಿಕೊಂಡಿರುತ್ತಾರೆ. ಈ ವ್ಯವಸ್ಥೆಯಲ್ಲಿ ಕುಟುಂಬಕ್ಕೆ ಪ್ರಥಮ ಆಧ್ಯತೆ ಸಲ್ಲುತ್ತದೆ. ತರುವಾಯ ಉದ್ಯೋಗ ಪರಿಗಣಿಸಲ್ಪಡುತ್ತದೆ. ಭಾರತದಂತಹ ದೇಶದಲ್ಲಿ ಕೃಷಿಯ ಪ್ರಧಾನ ಉದ್ಯೋಗವಾಗಿರುವಂತೆಯೇ ಅದಕ್ಕೆ ಹೊಂದಿಕೊಂಡು ಬೇರೆ ಬೇರೆ ವೃತ್ತಿಗಳು ಸೃಷ್ಟಿಗೊಂಡಿವೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿ ಮುಖ್ಯವಾದರೆ ಕಮ್ಮಾರಿಕೆ, ಬಡಿಗತನ, ಕುಂಬಾರಿಕೆ ಮುಂತಾದವುಗಳು ಕೃಷಿಯನ್ನವಲಂಬಿಸಿ ಬೆಳೆದ ವೃತ್ತಿಗಳೆನಿಸುತ್ತವೆ. ಈ ಉದ್ಯೋಗಗಳು ಭೌತಿಕ ಬದುಕಿಗೆ ಆಸರೆಯಾಗಿದ್ದರೆ ದೇವರು–ಧರ್ಮಗಳಂಥ ಭಾವುಕ ನಂಬಿಕೆಗಳ ಹಿನ್ನೆಲೆಯಲ್ಲಿ ಅನೇಕ ಸಂಪ್ರದಾಯ, ಆಚರಣೆಗಳು ರೂಢಿಗೊಳಗಾಗುತ್ತವೆ. ಈ ಅಂಶಗಳನ್ನು ದಾಟಿಕೊಂಡು ಸಾಮಾಜಿಕ ಜೀವನದ ವ್ಯವಸ್ಥಿತ ನಡಿಗೆ, ನೀತಿಸಂಹಿತೆ ಬೇಕೆಂದು ಆಡಳಿತಾತ್ಮಕ ವಿಧಾನವೊಂದು ಹಳ್ಳಿ ಬದುಕಿನ ದೈನಂದಿನ ಜೀವನಕ್ಕೆ ಅವಶ್ಯಕವೆನಿಸುತ್ತದೆ.

ಒಂದು ಕಾಲಕ್ಕೆ ತನ್ನಷ್ಟಕ್ಕೆ ತಾನು ಸಹಜವಾಗಿ ರೂಪಗೊಂಡ ಈ ರಚನೆಯಲ್ಲಿ ಕಾಲ ಕ್ರಮೇಣ ಭಾವುಕ ನಿಯಮಗಳು ಸೇರ್ಪಡೆಯಾಗಿ ಗ್ರಾಮೀಣ ಪರಿಸರವನ್ನು ಆವರಿಸಿಕೊಂಡಿದ್ದುಂಟು. ಈ ಭಾವುಕತನ ಉದ್ಯೋಗದಂತಹ ಭೌತಿಕ ಪರಿಶ್ರಮಕ್ಕೂ ವ್ಯಾಪಿಸಿಕೊಂಡಿರುವುದು ಆಶ್ಚರ್ಯವೆನಿಸುತ್ತದೆ. ಒಕ್ಕಲುತನವನ್ನು ಇಂಥವರೇ ಮಾಡಬೇಕು, ಕುರಿಯನ್ನು ಇಂಥವರೇ ಕಾಯಬೇಕು, ಇವರೇ

ಬಡಿಗರು, ಕಮ್ಮಾರರು ಎಂಬುವುದು ಗಟ್ಟಿಗೊಳ್ಳುತ್ತಾ ಆಯಾ ಉದ್ಯೋಗ ಮಾಡುವ ಗುಂಪುಗಳು ಜಾತಿಗಳಾಗಿ ಕಾಲ ಕ್ರಮೇಣ ಸಮಾಜ ರಚನೆಯಲ್ಲಿ ಜಾತಿ ವ್ಯವಸ್ಥೆ ಎಂಬುದು ಪ್ರಮುಖ ಅಂಶವಾಯಿತು.

ಈ ಬಗೆಯ ಸಮಾಜ ರಚನೆಯ ಹಿನ್ನೆಲೆಯಲ್ಲಿ ಉಜ್ಜಿನಿ ಸಾಮಾಜಿಕ ವ್ಯವಸ್ಥೆಯನ್ನು ನಾಲ್ಕು ನಿಟ್ಟಿನಿಂದ ಅಭ್ಯಸಿಸಲಾಗಿದೆ. ಅವುಗಳೆಂದರೆ:

೧. ಕುಟುಂಬ ವ್ಯವಸ್ಥೆ

೨. ಉದ್ಯೋಗ ವ್ಯವಸ್ಥೆ

೩. ವರ್ಣ ವ್ಯವಸ್ಥೆ

೪. ಆಡಳಿತ ವ್ಯವಸ್ಥೆ

ಉಜ್ಜಿನಿಯ ಕುಟುಂಬ ವ್ಯವಸ್ಥೆ ಕರ್ನಾಟಕದ ಬಹುತೇಕ ಹಳ್ಳಿಗಳಂತೆಯೇ ಇದೆ. ತರುವಾಯದ ಹಂತದಲ್ಲಿ ಉಜ್ಜಿನಿಯ ಮುಖ್ಯ ಉದ್ಯೋಗವೆನಿಸಿದ ಒಕ್ಕಲುತನವನ್ನು ವಿವರಿಸಿ ಹಂತದಲ್ಲಿ ವಿಶಿಷ್ಟವಾದ ವ್ಯಾಪಾರ, ಉದ್ಯೋಗವನ್ನು ಉಲ್ಲೇಖಿಸಬೇಕಾಗುತ್ತದೆ. ಮೂರನೆಯ ಹಂತದಲ್ಲಿ ಉದ್ಯೋಗ ವ್ಯವಸ್ಥೆಯನ್ನು ಅನುಸರಿಸಿಯೇ ವರ್ಣ ವ್ಯವಸ್ಥೆಯನ್ನು ವಿಂಗಡಿಸಿ ವಿಶ್ಲೇಷಿಸಬೇಕಾಗುತ್ತದೆ. ಇಲ್ಲಿ ಮುಖ್ಯ ಉದ್ಯೋಗ ಒಕ್ಕಲುತವನ್ನಾಶ್ರಯಿಸಿದ ವರ್ಣಗಳು ಒಂದು ಗುಂಪಾದರೆ ಈ ಒಕ್ಕಲುತನ್ನಾಶ್ರಯಿಸಿದ ಇತರ ವರ್ಣಗಳು ಎರಡನೆಯ ಗುಂಪಾಗುತ್ತವೆ. ಪ್ರತಿಯೊಂದು ಜಾತಿಯನ್ನು ನೋಡುವಾಗ ಅವರಲ್ಲಿಯ ಒಳ ಪಂಗಡಗಳು ಅವರ ದೇವರು, ಸಂಪ್ರದಾಯ, ಮತಾಚರಣೆ ಹೀಗೆ ಅನುಷಂಗಿಕವಾಗಿ ಬರುವ ಅನೇಕ ವಿಷಯಗಳನ್ನು ಇಲ್ಲಿ ಗಮನಿಸಬೇಕಾಗುತ್ತದೆ. ನಾಲ್ಕನೆಯದಾಗಿ ಇವರೆಲ್ಲ ಸುರಕ್ಷಿತ ಬದುಕಿಗೆ ಆಡಳಿತ ವ್ಯವಸ್ಥೆಯೆಂಬುದೊಂದು ಬೇಕು. ಆದಲ್ಲಿ ಗೌಡ, ತಳವಾರ, ಊರು ಹಿರಿಯರು ಮುಂತಾಗಿ ಮುಂದುವರೆಯುತ್ತದೆ. ಇದುವರೆಗಿನ ಅಂಶಗಳನ್ನು ಇನ್ನು ಮುಂದೆ ವಿವರವಾಗಿ ನೋಡಬಹುದು.

**ಕುಟುಂಬ ವ್ಯವಸ್ಥೆ :**

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವೆನ್ನುವುದು ಒಂದು ಪ್ರಮುಖವಾದ ಘಟಕ. ಗ್ರಾಮ ಜೀವನದಲ್ಲಿ ಕುಟುಂಬ ಸಂಸ್ಕೃತಿ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುತ್ತದೆ. ಒಂದು ಕುಟುಂಬದಲ್ಲಿನ ವ್ಯಕ್ತಿ–ವ್ಯಕ್ತಿಗಳ ಸಂಬಂಧ, ಇವರು ವಾಸಿಸುವ ಮನೆ, ಪ್ರೀತಿಸುವ ದನ–ಕರು, ಮಾಡುವ ಊಟ, ಧರಿಸುವ ಉಡುಗೆ ಇವೆಲ್ಲವುಗಳು ನಿರೂಪಣೆ ಕುಟುಂಬದ ಹಿನ್ನೆಲೆಯಲ್ಲಿ ಬಂದು ಸಮಾಜದ ಒಪ್ಪಂದದ ಸಮೀಕ್ಷೆಯಲ್ಲಿ ಅಭ್ಯಾಸಕ್ಕೆ ಯೋಗ್ಯವೆನಿಸುತ್ತದೆ.

ನಮ್ಮ ದೇಶದ ಬಹುತೇಕ ಹಳ್ಳಿಗಳಲ್ಲಿರುವಂತೆ ಉಜ್ಜನಿಯಲ್ಲಿಯೂ ಪಿತೃಪ್ರಧಾನವಾದ ಕುಟುಂಬ ಪದ್ಧತಿಯೇ ಇದೇ. ತಂದೆ ಮನೆಯ ಹಿರಿಯನಾದರೆ, ಅವನ ಹೆಂಡತಿ, ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು ಎಲ್ಲಾ ಅವನಿಗೆ ಅನುವರ್ತಿಗಳಾಗಿ ನಡೆದುಕೊಳ್ಳುತ್ತಾರೆ. ಕುಟುಂಬದ ಅವಿಭಕ್ತ-ವಿಭಕ್ತ ಯಾವುದೇ ಇರಲಿ ತಂದೆಯ ತರುವಾಯ ಅವನ ಹಿರಿಯ ಮಗನಿಗೆ ಆ ಪಟ್ಟ ಹೋಗುತ್ತದೆ. ಅವಿಭಕ್ತ ಕುಟುಂಬಗಳು ಹೆಚ್ಚಾಗಿದ್ದ ಕಾಲವೊಂದಿತ್ತು. ಮುಂಚಿನ ರೀತಿ ಈಗ ಉಳಿದಿಲ್ಲ. ಅವಿಭಕ್ತ ಕುಟುಂಬಗಳು ಕರಗುತ್ತಿವೆ. ಆದ್ರೆ ಹೊತ್ತು-ವೇಳೆ ಬಂದಾಗ ಅಣ್ಣ-ತಮ್ಮಂದಿರು ಒಬ್ಬರಿಗೊಬ್ಬರು ಆಗುತ್ತಾರೆ. ಅವಿಭಕ್ತ ಕುಟುಂಬಗಳು ಕರಗುತ್ತಿದ್ದರೂ, ತಂದೆ-ತಾಯಿಗಳಿಗೆ ಅನಾಥ ಪ್ರಜ್ಞೆ ಕಾಡುವುದಿಲ್ಲ. ಮಕ್ಕಳು ಬೇರೆಯಾದುದಕ್ಕೆ ಮರಗಬಹುದು ಅಷ್ಟೇ. ಮಗನೊಬ್ಬನ ಕಡೆಗೆ ಇವರು ಸುರಕ್ಷಿತವಾಗಿರುತ್ತಾರೆ. ಆ ಮಟ್ಟಿಗೆ ಇನ್ನೂ ಹಳ್ಳಿಗಳಲ್ಲಿ ಉಳಿದಿರುವ ಸಂಸ್ಕಾರ ಉಜ್ಜನಿಯಲ್ಲಿಯೂ ಉಳಿದುಕೊಂಡಿದೆ.

ಈ ಕುಟುಂಬ ಸದಸ್ಯರು ವಾಸಿಸುವ ಮನೆ ಇವರ ಊಟ-ಉಡುಗೆಗಳನ್ನು ಇನ್ನೂ ಮುಂದೆ ಅವಲೋಕಿಸಿ ತರುವಾಯ ಉಜ್ಜನಿಯ ಒಟ್ಟು ಅಂದವಾದ ಸಾಮಾಜಿಕ ವ್ಯವಸ್ಥೆಯ ಇತರ ಅಂಶಗಳನ್ನು ಗುರುತಿಸಬಹುದು.

**ಮನೆಗಳು :**

ಉತ್ತರ ಕರ್ನಾಟಕದ ರೀತಿಯಲ್ಲಿಯೇ ಉಜ್ಜನಿಯಲ್ಲಿ ಮಣ್ಣಿಗೆ ಮಾಳಿಗೆಯ ಮನೆಗಳಿವೆ. ಮಾಳಿಗೆಯ ಮೇಲೆ ಮೊಳಕಾಲು ಎತ್ತರದ ಕುಂಬೆಗಳಿವೆ. ಮಾಳಿಗೆಯ ಮೇಲೆ ಬಿದ್ದ ನೀರು ಹರಿದು ಹೋಗಲು ಹರಿನಾಳಿಗೆ ಇರುತ್ತವೆ. ಮನೆ ಹೊರಗೆ ಕಟ್ಟೆ ಇರುತ್ತದೆ. ಮನೆಯನ್ನು ಪ್ರವೇಶಿಸುವುದು ತಲ ಬಾಗಿಲಿನ ಮುಖಾಂತರ ಹೊಸ್ತಿಲನ್ನು ದಾಟಿ ಹೋಗಬೇಕು. ಉಜ್ಜನಿಯ ಮನೆಗಳ ತಲಾಬಾಗಿಲು ತುಂಬಾ ಅಗಲವಾಗಿವೆ. ಇಲ್ಲಿಯ ಬಹಳಷ್ಟು ತಲಬಾಗಿಲುಗಳು 'ಸಾಗುವಾನಿ' ಕಟ್ಟಿಗೆಯಿಂದ ಮಾಡಿದವುಗಳಾಗಿವೆ. ಹೊಸ್ತಿಲು ತುಂಬಾ ಪೂಜನೀಯವಾಗಿದ್ದು. ಆದ್ದರಿಂದ ಅದರ ಮೇಲೆ ಕೂಡುವಂತಿಲ್ಲ ಮತ್ತು ಅದನ್ನು ತುಳಿಯುವಂತಿಲ್ಲ.

ಹೊಸ್ತಿಲನ್ನು ದಾಟುವಾಗ ಆಕಸ್ಮಿಕ ಸೀತರೆ ತಲೆಯ ಮೇಲೆ ಅದಕ್ಕೆ ನೀರು ಕಾಬೇಕು. ಕಾಲನ್ನು ಬಡಿಸಿದರೆ ಬಗ್ಗಿ ನಮಸ್ಕಾರ ಮಾಡಬೇಕು. ಹೊಸ್ತಿಲನ್ನು ದಾಟಿದ ಕೂಡಲೇ ದನ-ಕರು ಕಟ್ಟಲು ವ್ಯವಸ್ಥೆಯಿರುವ 'ದಾಭೆ'ಯಲ್ಲಿ ಅಟ್ಟ ದನದ ಹಕ್ಕೆಯಲ್ಲಿ ಕಾಲಿಡುತ್ತೇವೆ. ಇದು ಭೂಮಿ ಮಟ್ಟದಲ್ಲಿಯೇ ಇರುತ್ತದೆ. ದನದ ಹಕ್ಕೆಯ ಒಂದು ಬದಿಯಲ್ಲಿ ಎತ್ತರವಾದ ಕಟ್ಟೆ ಕಟ್ಟಿ ಹೊಟ್ಟನ್ನು, ಪುಟ್ಟಿ ಸೊಪ್ಪೆಯ ಹೊರೆಗಳನ್ನು ಇಟ್ಟಿರುತ್ತಾರೆ. ದೊಡ್ಡ ರೈತರು ಈ ಕಟ್ಟೆಯ ಬುಡದಲ್ಲಿಯೇ

ಕೊರೆದು ಕಣಿಕೆ ಒಟ್ಟಲು ಮೇವಿನ ಗೂಡನ್ನು ಮಾಡಿಕೊಂಡಿರುವುದುಂಟು. ದನದ ಹಕ್ಕೆಯ ಒಂದು ಗೋಡೆಯ ಗಂಟು ೩-೪ ಅಡಿ ಎತ್ತರದ ಗ್ವಾದಲಿ ಇದ್ದು, ಇದರಲ್ಲಿ ಎತ್ತುಗಳಿಗೆ ತಿನ್ನಲು ಹೊಟ್ಟು, ಸೊಪ್ಪೆ, ಹುಲ್ಲು ಹಾಕಲಾಗುತ್ತದೆ. ದನದ ಹಕ್ಕೆಯಲ್ಲಿ ಇದಿರು (ಎದುರು) ಗ್ವಾದಲಿ ಎಂಬ ಇನ್ನೊಂದು ಬಗೆಯೂ ಉಂಟು. ಇಂಥದು ಹಕ್ಕೆಯ ಮಧ್ಯದಲ್ಲಿಯೇ ಇದ್ದು, ದನಗಳು ಇಲ್ಲಿ ಎದುರುಬದುರಾಗಿ ನಿಲ್ಲಲು ಸ್ಥಳಾವಕಾಶವಿರುತ್ತದೆ. ಹಕ್ಕೆಯ ಒಂದು ಮೂಲೆಯಲ್ಲಿ ಗಳ ಕಟ್ಟಿ ಒಕ್ಕಲುತನದ ಅನೇಕ ಉಪಕರಣಗಳನ್ನು ನೇತು ಹಾಕುತ್ತಾರೆ.

ದನದ ಹಕ್ಕೆಯನ್ನು ದಾಟಿ ಮೇಲೆ ಹತ್ತಿದರೆ 'ಪಡಸಾಲಿ' ಇದು ಭೂಮಿ ಮಟ್ಟದಿಂದ ೩-೪ ಅಡಿ ಎತ್ತರವಾಗಿದ್ದು, ಸಾಕಷ್ಟು ದೊಡ್ಡದಾಗಿರುತ್ತದೆ. ಮನೆಗೆ ಬಂದ ಅತಿಥಿಗಳು ಪ್ರವೇಶ ಮಾಡಿದ ಕೂಡಲೇ ಸಾಮಾನ್ಯವಾಗಿ ಕುಳಿತುಕೊಳ್ಳುವುದು ಇಲ್ಲಯೇ. ಪಡಸಾಲೆಯ ಗೋಡೆ ಸಾಕಷ್ಟು ಗೂಣ-ಬಿದಿರುಗಳಿಂದ ಕೂಡಿರುತ್ತದೆ. ಇವುಗಳಲ್ಲಿ ನಿತ್ಯ ಬಳಕೆಯ ವಸ್ತುಗಳನ್ನಿಡುವಂತೆ ಗೂಟಗಳಿಗೆ ಬಟ್ಟೆಗಳನ್ನು ಹಾಕುವ ವ್ಯವಸ್ಥೆ ಮಾಡಲಾಗುತ್ತದೆ. ಪಡಸಾಲೆಯಿಂದ ನಡುಮನೆಗೆ ಹೋಗುವ ಬಾಗಿಲ ಮೇಲೆ ಆಚೀಚೆಯ ಗೋಡೆಯ ಮೇಲೆ ತಮ್ಮ ಮನೆಯವರ ಪೋಟೊಗಳೂ ಅಲ್ಲಿ ಕಂಡುಬರುತ್ತವೆ. ಜೊತೆಗೆ ಇಷ್ಟ ದೇವತೆಗಳ ಪೋಟೊಗಳನ್ನು ತೂಗು ಹಾಕುತ್ತಾರೆ. ನಡುಮನೆಯ ಇದೇ ಬಾಗಿಲಿಗೆ ಸುಂದರವಾದ ತೋರಣವಿರುತ್ತವೆ. ಕಾಲದಿಂದ ಕಾಲಕ್ಕೆ ಈ ತೋರಣಗಳ ವಿನ್ಯಾಸವೂ ಬದಲಾಗುತ್ತಾ ಬಂದಿದೆ. ಮೊದಲಿನ ಕಾಲದಲ್ಲಿ ಬಳೆಚೂರುಗಳನ್ನು ಕಾಸಿ, ಮಣಿಸಿ ಮಾಡಿದ ತೋರಣಗಳು ಇದ್ದವು. ನಂತರ ಪ್ಲಾ ಸ್ಟಿಕ್ ಮುಂತಾದ ತೋರಣಗಳು ಬಂದಿವೆ. ನಡುಮನೆಯಲ್ಲಿ ಕಾಳಿನ ಚೀಲಗಳು, ಗುಡಾರ, ತಾಡಪಲ್ಲಗಳನ್ನು ಇಲ್ಲಿಯೇ ಇಡಲಾಗುವುದು. ನಿತ್ಯದ ಜಮಖಾನ, ಚಾಪಿ, ಹಾಸಿಗೆಗಳು ಮುಂತಾದವುಗಳು ಇಲ್ಲಿಯೇ ಸ್ಥಾನ ಪಡೆಯುತ್ತವೆ.

ನಡುಮನೆಯನ್ನು ದಾಟಿ ಹೋದರೆ ಅಡುಗೆ ಮನೆ ಬರುತ್ತದೆ. ಅಡುಗೆ ಮನೆಯೆಂಬುದು ಮನೆಯ ಪ್ರಮುಖ ಭಾಗ. ನಾಲ್ಕಾರು ಜನ ಕುಳಿತುಕೊಂಡು ಊಟ ಮಾಡುವಷ್ಟು ಇದು ದೊಡ್ಡದಾಗಿರುತ್ತದೆ. ಅಡುಗೆ ಮನೆಯ ಒಂದು ಮೂಲೆಯಲ್ಲಿ ಬಚ್ಚಲಿದ್ದು, ಅದೇ ಬದಿಯಲ್ಲಿ ನೀರಿನ ಹಂಡೆ, ತಪ್ಪಲಿಗಳನ್ನಿರಿಸಿದ ಕಟ್ಟೆಯಿರುತ್ತದೆ.

ಇನ್ನೊಂದು ಕಡೆ ತಾಟು, ಪ್ಲೇಟು, ತಂಬಿಗೆ, ಲೋಟ, ಚಮಚ ಮುಂತಾದ ಸಾಮಾನುಗಳನ್ನಿಟ್ಟು ಸೆಲ್ಫನ್ನು ಗೋಡೆಗೆ ಅಳವಡಿಸಲಾಗಿರುತ್ತದೆ. ಹಾಲು, ಮೊಸರಿನ ಗಡಿಗೆ, ಕುಡಿಕೆಗಳನ್ನಿಡಲು ಮುಂಚೆಲ್ಲ ನೆಲವುಗಳೇ ವಿಶೇಷವಾಗಿದ್ದವು. ಈಗ ಗೋಡೆಯಲ್ಲಿಯೇ ಕಪಾಟು ಮಾಡಲಾಗುತ್ತದೆ. ನಂತರ ತ್ರಿಕೋನಾಕಾರದಲ್ಲಿ ಮೂರು ದುಂಡನೆಯ ಕಲ್ಲುಗಳಿರುತ್ತವೆ. ಇವು ಒಲೆ ಗುಂಡಾಗಳೆನಿಸುತ್ತವೆ.

ಇವನ್ನು ಬಡಿಬಡಿದಂತೆ ಒಲೆಯ ಮೇಲಿನ ಹಂಚಿನಲ್ಲಿ ಹಾಕಿ ಬೇಯಿಸಿದರೆ ರೊಟ್ಟಿ ತಯಾರಾಗುತ್ತದೆ. ರೊಟ್ಟಿಯೊಂದಿಗೆ ತಿನ್ನಲು ತೊಗರೆ, ಅಲಸಂಧಿ, ಕಡ್ಲಿ, ಹುರುಳಿ ಮುಂತಾದ ಕಾಳಿನ ಪಲ್ಯ ಮಾಡುತ್ತಾರೆ. ಜವಳಿಕಾಯಿ, ಬದನೆಕಾಯಿ, ಮೆಂತೆ, ರಾಜಗಿರಿ ಮುಂತಾದ ತರಕಾರಿ ಮತ್ತು ಸೊಪ್ಪನ್ನು ಬಳಸಲಾಗುತ್ತದೆ. ಜೊತೆಗೆ ಉಪ್ಪಿನಕಾಯಿ, ದನ-ಕರು ಇರುವವರು ಮೊಸರು, ಹಾಲು, ಮಜ್ಜಿಗೆ ನಿತ್ಯ ಬಳಸುವ ಊಟವಾಗಿದೆ.ರೊಟ್ಟಿಯ ನಂತರ ಮೇಲೆ ಅನ್ನವನ್ನು ಊಟ ಮಾಡುತ್ತಾರೆ. ಊಟಕ್ಕೆ ಈ ಹಿಂದೆ ಕಂಚಿನ ತಾಟಗಳಿದ್ದವು. ಈಗ ಅವುಗಳ ಸ್ಥಾನವನ್ನು ಸ್ಟೀಲ್‌ನ ತಾಟಗಳು ಆಕ್ರಮಿಸಿಕೊಂಡಿವೆ.

ಹಬ್ಬಗಳಲ್ಲಿ ಊಟಕ್ಕೆ ಹೋಳಿಗೆ ಊಟಕ್ಕೆ ಸಾಮಾನ್ಯವಾಗಿ ಸೆಂಡಿಗೆ, ಹಪ್ಪಳ, ಉಪ್ಪಿನಕಾಯಿಗಳು ಸಾಮಗ್ರಿಗಳಾದರೆ ಅನ್ನಕ್ಕೆ ಕಟ್ಟಿನ ಸಾರುಬೇಕು. ಕೆಲವರು ಹಿಂದೆ ಹುಗ್ಗಿ, ಮಾದ್ಲಿಗಳನ್ನು ಈ ಹಬ್ಬದ ದಿನಗಳಂದು ಮಾಡಿರುತ್ತಾರೆ. ಕೆಲವು ಅಡುಗೆ ಪದಾರ್ಥಗಳು ಇಂತಿಂಥ ಹಬ್ಬಗಳಿಗೆಂದೆ ಪ್ರಸಿದ್ಧಗೊಂಡಿದೆ. ತರತರದ ಉಂಡಿ, ಕರಚಿಕಾಯಿ, ಗಾರಗಿ, ಕೋಡಿಬಳಿ ಇವೆಲ್ಲ ಪಂಚಮಿಯ ವಿಶೇಷಗಳಾದರೆ, ಎಳ್ಳು ಹಚ್ಚಿದ ಸಜ್ಜಿ ರೊಟ್ಟಿ, ಪುಂಡಿಪಲ್ಯ, ಕುದಿಸಿದ ಹಸಿಮೆಣಸಿನಕಾಯಿಯ ಕಾರ, ಚಟ್ನಿ ಎಳ್ಳು ಅಮವಾಸ್ಯೆಯ ವಿಶೇಷಗಳು. ಇವುಗಳೊಂದಿಗೆ ಹೋಳಿಗೆ ಅಥವಾ ಹೂರಣದ ಕಡಬು ಇದ್ದೇ ಇರುತ್ತದೆ. ಕಾರಹುಣ್ಣಿಮೆಗೆ ಹುರಕ್ಕಿ ಕರಚಿಕಾಯಿ ಮಾಡುವುದು ವಿಶೇಷ. ಪಂಚಮಿಗೆ ಎಳ್ಳುಉಂಡಿ ಮಾಡಿ ಹೆಣ್ಣು ಮಕ್ಕಳಿಗೆ ಕಳಿಸುವಂತೆ ಕಾರಹುಣ್ಣಿಮೆಗೆ ಕರಚಿಕಾಯಿ ಕಳಿಸಿಕೊಡಲಾಗುವುದು.

ಶ್ಯಾವಿಗೆ ಗುಳಿಗೆ (ಸವತಿಬೀಜ) ಬೇಸಿಗೆಯಲ್ಲಿ ಮಾಡಿ ಅಡಕಲು ತುಂಬಿ ಇಡಲಾಗುವುದು. ಆ ವೇಳೆಯಲ್ಲಿ ಬಂದ ಬೀಗರಿಗೆ ವಿಶೇಷ ಅಡುಗೆ ಮಾಡುವ ಪ್ರಸಂಗ ಬಂದರೆ ಶ್ಯಾವಿಗೆ ಬಸಿಯಲಾಗುತ್ತದೆ. ಶ್ಯಾವಿಗೆಗೆ ಸಕ್ಕರೆ ಅಥವಾ ಬೆಲ್ಲ, ಹಾಲು ಹಾಕಿ ಮೇಲೆ ಒಂದಿಷ್ಟು ತುಪ್ಪ ಸುರಿದು ಬಿಟ್ಟರೆ ಬಂದ ಬೀಗರು ಬಲು ಸಂತೃಪ್ತಿ ಹೊಂದುತ್ತಾರೆ.

**ವೇಷಭೂಷಣ :**

ಪುರುಷರು ಸಾಂಪ್ರಾದಾಯಿಕ ರೀತಿಯಲ್ಲಿ ಧೋತ್ರ ಉಟ್ಟು ಮೇಲೆ ಅಂಗಿ ಹಾಕಿ ತಲೆಗೆ ಟವಲನ್ನು ಸುತ್ತುತ್ತಾರೆ. ಇತ್ತೀಚಿನ ದಿನಗಳಲ್ಲಿ ಮುದಕರು ಮಾತ್ರ ಸುತ್ತಿಕೊಂಡಿರುತ್ತಾರೆ.

**ಪುರುಷರು :**

ಹಬ್ಬದ ದಿನಗಳಲ್ಲಿ ಮದುವೆ-ಮುಂಜಿಯ ಸಂದರ್ಭಗಳಲ್ಲಿ ಪುರುಷರು ಇದ್ದುದರಲ್ಲಿ ಬೆಲೆಯುಳ್ಳ ಅಂಗಿಯನ್ನು ಇಸ್ತ್ರಿ ಮಾಡಿಸಿ ತೊಡುತ್ತಾರೆ. ಇಂಥ ಬೆಲೆಯುಳ್ಳ ಅಂಗಿ ಹೊಲೆಸುವುದು ವರ್ಷಕ್ಕೆ

ಒಂದೇ ಬಾರಿ ಅದೇ ಹಬ್ಬ, ಮದುವೆ ಸಂದರ್ಭಗಳಲ್ಲಿ ಇಂತ ಅಂಗಿಯಲ್ಲದೇ ಮಸರಾಯಿ ಪಂಚೆ ಉಟ್ಟು ಹೆಗಲಿಗೆ ಮಪ್ಪಲರ್‌ನ್ನು ಹಾಕಿಕೊಂಡಿರುತ್ತಾರೆ.

**ಹೆಂಗಸರು :**

ಹೆಣ್ಣು ಮಕ್ಕಳು ಜಾತ್ರೆ-ಓಕುಳಿಗಳಲ್ಲಿ ಇಳಕಲ್ಲು ಸೀರೆಯುಡುತ್ತಾರೆ. ಇವರು ತಮ್ಮ ಮದುವೆ ಜರಗುವ ಸಂದರ್ಭದಲ್ಲಿ ಹಾಗೂ ಗ್ರಾಮ ದೇವತೆಯ ಜಾತ್ರೆಯ ಸಂದರ್ಭದಲ್ಲಿ ಮಾತ್ರ ಇಂತಹ ಸೀರೆ ಹೊರಬರುತ್ತದೆ. ಉಳಿದಂತೆ ಈ ಸೀರೆ ಅವರ ಖಾಸ ಟ್ರಂಕಿಗೆ ಜೀವಮಾನದುದ್ದಕ್ಕೂ ಭದ್ರವಾಗಿರುತ್ತದೆ.

ಆಭರಣಗಳ ವಿಷಯದಲ್ಲಿ ಹೆಣ್ಣು ಮಕ್ಕಳದೇ ಮೇಲುಗೈ. ಗುಳದಾಳಿ, ಮೂಗುಬಟ್ಟು, ಒಂದು ಕಾಲಕ್ಕೆ ಎಕಸರ, ಗೆಜ್ಜೆ ಪಟ್ಟಿ, ತೋಳಬಂಧಿ, ಬುಗಡಿ, ತಲಾಕ್ ಕಡ್ಡಿ ಹೆಣ್ಣು ಮಕ್ಕಳು ತೊಡುವ ವಿಶೇಷ ಆಭರಣಗಳಾಗಿದ್ದವು. ಈಗ ಅವೆಲ್ಲ ಬೇರೆ ಸ್ವರೂಪ ತೊಟ್ಟಿವೆ. ಚೈನು, ಮಾಂಗಲ್ಯ ಸರ, ನೆಕ್ಲೇಸ್ ಮುಂತಾದವುಗಳು ಹೆಚ್ಚಾಗಿವೆ. ಈಗ ಬಂಗಾರ ಬಳೆಯ ಮೋಹ ಬೆಳೆಯುತ್ತಿದೆ. ನಡುವಿಗೆ ಹಾಕುವ ಪಟ್ಟಿ, ತೋಳಬಂಧಿ, ಡಾಬು ಇಂದು ಕಣ್ಮರೆಯಾಗಿವೆ.

**ಕೃಷಿ :**

ಒಕ್ಕಲುತನ ಉಜ್ಜನಿಯ ಪ್ರಧಾನ ಉದ್ಯೋಗ. ಇಲ್ಲಿಯ ಒಕ್ಕಲುತನದ ರೀತಿಯನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು. ಒಂದು ಒಕ್ಕಲುತನಕ್ಕೆ ಸಂಬಂಧಿಸಿದ ಭೌತಿಕ ಕ್ರಮ ಎರಡು ಒಕ್ಕಲುತನಕ್ಕೆ ಸಂಬಂಧಿಸಿದ ಭಾವುಕ ಆಚರಣೆಗಳು. ಈ ವ್ಯವಸಾಯದ ವಾರ್ಷಿಕ ಚಕ್ರದಲ್ಲಿ ಒಣ ಬೇಸಾಯ ಮತ್ತು ನೀರಾವರಿ ಎಂದು ಮತ್ತೆರಡು ಬಗೆಗಳು. ಈ ಎರಡು ಬಗೆಯ ವ್ಯವಸಾಯಕ್ಕೆ ಸಂಬಂಧಪಡುವ ಜಮೀನು ಉಜ್ಜನಿಯಲ್ಲಿದೆ. ಒಣ ಬೇಸಾಯದ ಒಂದು ಕೃಷಿ ವರ್ಷದಲ್ಲಿ ಮುಂಗಾರು ಮತ್ತು ಹಿಂಗಾರು ಎಂದು ವಿಧಗಳಿವೆ. ನೀರಾವರಿ ಜಮೀನನಲ್ಲಿ ಮುಂಗಾರು ಪ್ರಶ್ನೆ ಬರುವುದಿಲ್ಲ. ಮುಂಗಾರು ಬೆಳೆಗಳನ್ನು ಹಿಂಗಾರಿನಯಲ್ಲಿಯೂ, ಹಿಂಗಾರು ಬೆಳೆಗಳನ್ನು ಮುಂಗಾರಿನಲ್ಲಯೂ ಬೆಳೆಯುತ್ತಾರೆ. ಅವರು ವರ್ಷಕ್ಕೆ ಮೂರು ಬೆಳೆಗಳನ್ನು ಬೆಳೆಯುವರು.



**ಭೌತಿಕ ಕ್ರಮ :**

ಉಜ್ಜಿನಿಯಲ್ಲಿ ಒಣ ಬೇಸಾಯದ ಜಮೀನು ಅಧಿಕವಾಗಿರುವುದರಿಂದ ಇದಕ್ಕೆ ಸಂಬಂಧಿಸಿದ ಕೃಷಿ ಪದ್ಧತಿ ಹೆಚ್ಚು ಸಂಕೀರ್ಣವೂ ಆಗಿರುವುದರಿಂದ ಅದನ್ನು ಹೆಚ್ಚು ವಿಸ್ತರಿಸಲಾಗಿದೆ. ಮುಂಗಾರಿನ ಅವಧಿಯೊಂದಿಗೆ ಒಣ ಬೇಸಾಯದ ಚಟುವಟಿಕೆಗಳನ್ನು ಮಾಡಲಾಗುತ್ತವೆ.

**ಮುಂಗಾರು :**

ಬೇಸಿಗೆಯಲ್ಲಿ ಕೂಲಿ ಅಂದರೆ ಕೊಯ್ದು ಪೈರಿನ ಉಳಿದ ಕಳೆವು ಆರಿಸುವುದು, ಗೊಬ್ಬರ ಹಾಕುವುದರೊಂದಿಗೆ ಮುಂಗಾರು ಅವಧಿಯ ಕೆಲಸಗಳು ಪ್ರಾರಂಭಗೊಳ್ಳುತ್ತವೆ.

**ಗೊಬ್ಬರ ಹಾಕುವುದು :**

ವರ್ಷದ ಉದ್ದಕ್ಕೂ ತಿಪ್ಪೆಯಲ್ಲಿ ಸಂಗ್ರಹಗೊಂಡ ಗೊಬ್ಬರವನ್ನು ತಟ್ಟಿಕಟ್ಟಿದ ಚಕ್ಕಡಿಯಲ್ಲಿ ಅಥವಾ ಟ್ರ್ಯಾಕ್ಟರ್‌ಗಳಲ್ಲಿ ತುಂಬಿ ಹೊಲಕ್ಕೊಯ್ದು ಅಲ್ಲಲ್ಲಿ ಗುಪು ಹಾಕಲಾಗುತ್ತದೆ. ಕೆಲ ದಿನಗಳ ತರುವಾಯ ಈ ಗುಂಪೆಗಳನ್ನು ಒಡೆದು ಹೊಲದ ತುಂಬಾ ಹರಡುವುದು.

**ಉಳುಮೆ :**

ಭೂಮಿಯನ್ನು ಹದ ಮಾಡಲು ಹರಗುವುದು, ರಂಟೆ ಹೊಡೆಯುವುದು ಇವೆಲ್ಲ ಒಂದಾದ ಮೇಲೆ ಒಂದರಂತೆ ನಡೆಯುತ್ತವೆ. ಸಾಮಾನ್ಯವಾಗಿ ರೋಹಿಣಿ ಮೊದಲ ಮಳೆಗೆ ಎರಡು ಬಾರಿ ಹರಗುತ್ತಾರೆ. ಹೊಲಕ್ಕೆ ಕರಿಕೆ, ಜೇಕು ಹತ್ತಿದ್ದರೆ ನಾಲ್ಕೆತ್ತಿನ ನೇಗಿಲು ಹೂಡಿ ಹಸನ ಮಾಡುತ್ತಾರೆ. ಒಡ್ಡಿನ ಬದಿಯಲ್ಲಿ ಕರಿಕೆ ಬೆಳೆದಿದ್ದರೆ ನೆಟ್ಟು ಕಡಿದು ಸ್ವಚ್ಛಗೊಳಿಸಲಾಗುತ್ತದೆ.

ಸಾಮಾನ್ಯವಾಗಿ ಭೂಮಿ ಹದ ಮಾಡುವ ಕೆಲಸ ಹೊತ್ತು ಮಾಡುವುದರೊಂದಿಗೆ ಪ್ರಾರಂಭಗೊಂಡು ಮಧ್ಯಾಹ್ನದ ಹೊತ್ತಿಗೆ ಮುಕ್ತಾಯಗೊಳ್ಳುತ್ತದೆ. ಬೇಸಿಗೆಯಲ್ಲಿ ಈ ಕೆಲಸ ನಡೆಯುವುದರಿಂದ ಎತ್ತುಗಳಿಗೆ ಅಥವಾ ತಮಗೆ ತೊಂದರೆಯಾಗಬಾರದೆಂದು ಕೃಷಿಕರು ಮಾಡಿಕೊಂಡ ಅನುಕೂಲವಿದು. ರಂಟೆ ಹೊಡೆಯುವುದು, ಹರಗುವುದು, ನೇಗಿಲ ಹೊಡೆಯುವುದು ಯಾವುದೇ ಇರಲಿ ಇದೆಲ್ಲ ಬ್ಯಾಸಗಿ 'ಗಳೆ' ಎನ್ನಿಸಿಕೊಳ್ಳುತ್ತದೆ. ಬೇಸಿಗೆಯ ಗಳೇವು ಸಂದರ್ಭದಲ್ಲಿಯೇ ಮಧ್ಯಾಹ್ನದ ಮೇಲೆ ರೈತರು ಮನೆಯ ಮುಂದೆ ಹಗ್ಗ ಹೊಸೆಯುತ್ತಾರೆ. ವರ್ಷವಿಡೀ ಬೇಕಾಗುವ ಗುದ್ದಿ ಹಗ್ಗ, ಹಗೆ ಹಗ್ಗ, ಮೇಲ್ಬಗ ಹಿಡಿ ಹಗ್ಗ ಮುಂತಾದವುಗಳನ್ನು ತಯಾರಿಸಿಕೊಳ್ಳಲು ಮಧ್ಯಾಯಹ್ನದ ಈ ಬಿಡುವಿನ ವೇಳೆಯೇ ಯೋಗ್ಯವಾದದ್ದು.

ಒಕ್ಕಲುತನಕ್ಕೆ ಬೇಕಾಗುವ ಎಲ್ಲಾ ಸಲಕರಣೆಗಳನ್ನು ತಯಾರಿಸಿ ಕಾರಹುಣ್ಣಿಮೆಯಲ್ಲಿ ಬೇರೆ ಬೇರೆ ಬಣ್ಣ ಎದ್ದುತ್ತಾರೆ. ಕಾರ ಹುಣ್ಣಿಮೆ ಸಮಯದಲ್ಲಿ ಬಗೆ ಬಗೆಯ ಹಗ್ಗ, ಕಣ್ಣಿ, ಹೊಟ್ಟು

ತುಂಬುವ ಜಲ್ಲಿ ಮುಂತಾದವನ್ನು ತಯಾರಿಸಿಕೊಳ್ಳುತ್ತಾರೆ. ಈಗ ಕಾಲ ಬದಲಾಗಿದೆ. ಸರಕಾರಿ ಗೊಬ್ಬರ ಚೀಲಗಳನ್ನೆ ಹರಿದು ಹೊಂದಿಸಿ ಹೊಲೆದುಕೊಂಡು ದೊಡ್ಡ ದೊಡ್ಡ ಪಾಟಗಳನ್ನಾಗಿ ಮಾಡಿಕೊಂಡು ಕೃಷಿಯ ಕೆಲಸಕ್ಕೆ ಬಳಸಿಕೊಳ್ಳುತ್ತಾರೆ.

**ಬಿತ್ತನೆ :**

ಮುಂಗಾರಿನ ಬಿತ್ತನೆ ಸಾಮಾನ್ಯವಾಗಿ ರೋಹಿಣಿ ಮಳೆಯಿಂದ ಪ್ರಾರಂಭಗೊಳ್ಳುತ್ತದೆ. ರೋಹಿಣಿ ಮಳೆಗೆ ಸ್ವಲ್ಪ ಮುಂಚೆ ಬೇಕಾಗುವ ಬೀಜದ ವ್ಯವಸ್ಥೆಯನ್ನು ರೈತರು ಮಾಡಿಕೊಳ್ಳುತ್ತಾರೆ. ಶೇಂಗಾ, ಅಕ್ಕಡಿಕಾಳು ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಮುಂಗಾರು ಬಿತ್ತನೆಗೆ ಮೊದಲ ಕೂರಿಗೆ ಪೂಜೆಯಾಗುತ್ತದೆ. ಪ್ರಾರಂಭದಲ್ಲಿ ಏನೇ ಬಿತ್ತಲಿ ಆ ಬೀಜದಲ್ಲಿ ಒಂದಿಷ್ಟು ಮಣ್ಣು ಮತ್ತು ಸಾಸಿವೆ ಬೆರಸಬೇಕೆನ್ನುವುದು ಇಲ್ಲಿಯ ನಂಬಿಕೆ. ಉಜ್ಜಿನಿಯಲ್ಲಿ ಕುರುಬರು ಮೊದಲು ಬಿತ್ತಿದ ಮೇಲೆಯೇ ಉಳಿದವರು ಬಿತ್ತನೆಗೆ ತೊಡಗುತ್ತಿದ್ದರು. ಆದರೆ ಅದು ಇಂದು ಮರೆಯಾಗಿದೆ. ಜೋಳವನ್ನು ಕೂರಿಗೆಗೆ ಸಡ್ಡೆಕಟ್ಟಿ ಸೆಡ್ಡೆಯ ಮುಖಾಂತರ ಬೀಜಬಿಟ್ಟು ಬಿತ್ತಲಾಗುತ್ತದೆ. ಅಕ್ಕಡಿಕಾಳನ್ನು ಕೂರಿಗೆಯ ಹಿಂದಿನಿಂದ ಸಡ್ಡೆಯ ಮೂಲಕ ಬಿತ್ತಲಾಗುತ್ತದೆ. ಅಕ್ಕಡಿ ಹಾಕುವವರೂ ನಡುವಿನಲ್ಲಿ ಹುಡಿಚೀಲ ಕಟ್ಟಿಕೊಂಡು ಅದರಲ್ಲಿ ಕಾಳು ಸಂಗ್ರಹಿಸುತ್ತಾರೆ. ಮುಂದೆ ಕೂರಿಗೆ ಹೋಗುತ್ತಿದ್ದಂತೆ ಹಿಂದೆ ಬೆಳೆಸಾಲು ಹೊಡೆದು ಕಾಳು ಚೆನ್ನಾಗಿ ಮುಚ್ಚುವಂತೆ ಮಾಡಲಾಗುತ್ತದೆ.

**ಎಡೆ ಹೊಡೆಯುವುದು :**

ಬಿತ್ತಿದ ಬೀಜ ಮೊಳಕೆಯೊಡೆದು ಬೆಳೆಯುತ್ತ ಹೋದಂತೆ ಆ ಬೆಳೆಯ ಸುತ್ತಮುತ್ತ ಬಗೆ ಬಗೆಯ ಕಸಗಳೇಳುತ್ತವೆ. ಈ ಕಸವನ್ನು ಸ್ವಚ್ಛ ಮಾಡದಿದ್ದರೆ ಬೆಳೆಯ ಸತ್ವವನ್ನು ಕಸವೇ ಹೀರಿ ಬೆಳೆಯು ಚೆನ್ನಾಗಿ ಬಾರದ ಹಾಗೆ ಆಗುತ್ತದೆ. ಆದ್ದರಿಂದ ಎಡೆ, ಕುಂಟೆ ಹೊಡೆಯುವುದರ ಮೂಲಕ ಬೆಳೆಯ ಸುತ್ತಲಿನ ಕಸವನ್ನು ಸ್ವಚ್ಛ ಮಾಡುವುದು ಒಂದು ಕ್ರಮ. ಎಡೆಯಲ್ಲಿ ಎರಡು ಬಗೆ. ಎಡೆಯ ದಿಂಡಿಗೆ ಕಬ್ಬಿಣದ ತಾಳ ಸಿಕ್ಕಿಸಿ ನಡುವಿನ ಪೊಳ್ಳಿನಲ್ಲಿ ಸಸಿ ಬರುವಂತೆ ಹೊಡೆಯುವುದು ಒಂದು ಕ್ರಮವಾಗಿದೆ. ಬೆಳೆಯ ಎರಡು ಸಾಲಿನ ಮಧ್ಯ ಎಡೆ ಹೊಡೆಯುವುದು ಇನ್ನೊಂದು ಕ್ರಮ. ಎರಡನೆಯದಕ್ಕೆ ಡುಮ್ಮಗುಂಟಿ ಎಂದು ಕರೆಯುತ್ತಾರೆ.

ಎಡೆ ಹೊಡೆಯುವುದಲ್ಲದೇ ಕೈಯಿಂದಲೂ ಕಳೆ ಕಿತ್ತು ಸ್ವಚ್ಛಗೊಳಿಸುವ ಕ್ರಮವೂ ಇನ್ನೊಂದಿದೆ. ಬಿತ್ತಿದ ಮೇಲೆ ವಿಪರೀತ ಮಳೆಯಾದರೆ ಹೊಲದ ತುಂಬ ಅಧಿಕ ಪ್ರಮಾಣದಲ್ಲಿ ಬೆಳೆಯುವ ಕಸವನ್ನು ಆಳು ಹಚ್ಚಿ ಸ್ವಚ್ಛ ಮಾಡುವುದು, ಕಳೆ ತೆಗೆಯುವವರ ಕೈಯಲ್ಲಿ ಕುರ್ಜಗಿ ಹಿಡಿದು ಕೆಲಸ ಮಾಡುತ್ತಾರೆ.

**ಕೊಯ್ಯುವುದು :**

ಮುಂಗಾರು ಜೋಳ ಮಾಗಿ ಬಂದಂತೆ ಕೊಯ್ಯಲು ಪ್ರಾರಂಭಿಸುತ್ತಾರೆ. ಬೆಳೆಯನ್ನು ಕುಡಗೋಲಿನಿಂದ ಕೊಯ್ಯುತ್ತಾ ಸಿವುಡು ಕಟ್ಟಿ ೫–೬ ಸಿವುಡಗೊಂದರಂತೆ 'ಕಾಗೂಡು'ಗೆ ಅಲ್ಲಲ್ಲಿ ಮೆದೆಗಳನ್ನು ನಿಲ್ಲಿಸುತ್ತಾರೆ. ಈ ಮೆದೆಗಳನ್ನು ಹೊಲದಲ್ಲಿ ಒಂದೆರಡು ಕಡೆ ಸಂಗ್ರಹಿಸಿ ಗೂಡು ಹಾಕುತ್ತಾರೆ.

**ಕಣ :**

ಕೊಯ್ಯುವುದು ನಡೆದಿರುವಂತೆಯೇ ಊರ ಸಮೀಪದಲ್ಲಿರುವ ಅವರವರ ಜಾಗದಲ್ಲಿ ಕಣಕ್ಕೆಂದೇ ಮೀಸಲಿಟ್ಟ ಸ್ಥಳದಲ್ಲಿ ಕಣ ಮಾಡಲಾಗುತ್ತದೆ. ಭೂಮಿಯನ್ನೇ ದುಂಡಗೆ ಸ್ವಲ್ಪ ಅಗಿದು ನೆಲವನ್ನು ಗಟ್ಟಿ ಮಾಡಿಕೊಂಡು ನಡುವೆ ಮೇಟಿಯನ್ನು ಹುಗಿಯಲಾಗುತ್ತದೆ. ಮೇಟಿ ಹುಗಿದ ಮೇಲೆ ಸುತ್ತಲೂ ಜೋಡಿಕಟ್ಟಿ ದನಗಳನ್ನು ತಿರುಗಿಸಿ ಸೆಗಣಿ, ನೀರು ಚಿಮುಕಿಸಿ ಕಣದ ನೆಲವನ್ನು ಗಟ್ಟಿ ಮಾಡಲಾಗುತ್ತದೆ. ತಮ್ಮ ಒಕ್ಕಲಿನ ಪ್ರಮಾಣಕ್ಕೆ ತಕ್ಕಂತೆ ಈ ಕಣದ ಅಳತೆಯನ್ನು ನಿರ್ಮಿಸಿಕೊಳ್ಳುತ್ತಾರೆ.

**ತೆನೆ ಮುರಿಯುವುದು :**

ಈಗಾಗಲೇ ಗೂಡು ಹಾಕಿದ ತೆನೆ ಅಥವಾ ಮೆದೆ ಹಾಕಿದ ಸ್ಥಳದ ಮಧ್ಯದಲ್ಲಿ ಗುಡಾರ ಪಾಟು ಅಥವಾ ತಾಡಪಲ್ಲು ಹಾಸಿ ತೆನೆ ಮುರಿಯಲಾಗುತ್ತದೆ. ಸಣ್ಣ ಸಣ್ಣ ಕುಡಗೋಲಿನ ಮುಖಾಂತರ ಹೆಚ್ಚಾಗಿ ಗಂಡು ಮಕ್ಕಳೇ ಈ ಕಾರ್ಯನಿರ್ವಹಿಸುತ್ತಾರೆ. ತೆನೆ ಹಣಿಕೆಯನ್ನು ಅವರ ಮುಂದೆ ಹಾಕುತ್ತ ಹೋದಂತೆ ಹೆಣ್ಣು ಮಕ್ಕಳು ತೆನೆ ಗಣಿಕೆಯಿಂದ ತೆನೆಯನ್ನು ಬೇರ್ಪಡಿಸಿ ಗುಡಾರದ ಮಧ್ಯದಲ್ಲಿ ತೆನೆಗಳನ್ನು ಸಂಗ್ರಹಿಸಲಾಗುತ್ತದೆ. ತೆನೆ ಮುರಿದ ಮೇಲೆ ಉಳಿಯುವ ಒಣ ದಂಟು, ಮಂಡ ಗಣಿಕೆ ಎನ್ನಿಸಿಕೊಳ್ಳುತ್ತದೆ. ಇದನ್ನು ಮತ್ತೆ ಬಣವೆ ಹಾಕಿ ಒಟ್ಟಲಾಗುತ್ತದೆ. ತೆನೆಯನ್ನು ಕಣದ ದಂಡೆಯ ಒಕ್ಕಲು ಮನೆಗೆ ತಂದು ಹಾಕಲಾಗುತ್ತದೆ. ಈ ಇಕ್ಕೆಲಿ ಮನೆಯೇ ರಾಶಿ ನಡೆಯುತ್ತಿರುವಂತೆ ಕಂಕಿ ಮನೆಯಾಗುತ್ತದೆ.

**ರಾಶಿ ಮಾಡುವುದು :**

ಬೇರೆ ಬೇರೆ ಹೊಲಗಳಲ್ಲಿ ಸಂಗ್ರಹಗೊಂಡ ತೆನೆಯನ್ನು ಕಣಕ್ಕೆ ತಂದು ಸುರವಲಾಗುತ್ತದೆ. ತೆನೆಯನ್ನು ಮೇಟಿಯ ಸುತ್ತಲೂ ಎಳೆದು ಸುತ್ತಲು ಕಣಿಕೆಯ ಹೊರೆಗಳನ್ನು ಜೋಡಿಸಿ ಇಂಡಿಗೆ ಕಟ್ಟಲಾಗುತ್ತದೆ. ಮೂಹೂರ್ತ ನೋಡಿ ರಾಶಿಯ ದಿನವನ್ನು ನಿಶ್ಚಯಪಡಿಸಿಕೊಂಡು ಸಂಜೆಯಾಗುತ್ತಿದ್ದಂತೆ ಹಂತಿ ಕಟ್ಟಲಾಗುತ್ತದೆ. ಹಂತಿ ಕಟ್ಟಲು ತಮ್ಮ ಎತ್ತುಗಳಷ್ಟೇ ಸಾಲುವುದಿಲ್ಲವಾದ್ದರಿಂದ ಬೇರೆಯವರ ಎತ್ತುಗಳನ್ನು ತರಲಾಗುತ್ತದೆ. ಅಥವಾ ಬೇರೆಯವರು ಸ್ವಪ್ರೇರಣೆಯಿಂದಲೇ ತಮ್ಮ ಎತ್ತುಗಳೊಂದಿಗೆ

ಬರುತ್ತಾರೆ. ಹಂತಿ ಕಣ್ಣಿಯಿಂದ ಎತ್ತುಗಳನ್ನು ಬಂಧಿಸಿ ಎರಡು ಮೂರು ಸರಮಾಡಿ ಮೇಟಿಗೆ ಕಟ್ಟಲಾಗುತ್ತದೆ. ಮೇಟಿಯ ಸುತ್ತಲೂ ಎತ್ತುಗಳು ತಿರುಗುತ್ತ ಹೋದಂತೆ ತೆನೆಯಿಂದ ಕಾಳು ಬೇರ್ಪಡುತ್ತವೆ. ಹೀಗೆ ಕಾಳು ಬೇರ್ಪಟ್ಟಂತೆ ಉಳಿಯುವ ಕಂಕಿಯನ್ನು ಕಣದ ಒಂದು ಬದಿಯಲ್ಲಿ ಸಂಗ್ರಹಿಸುತ್ತ ಹೋಗುತ್ತಾರೆ. ಮುಂಜಾನೆಯ ಹೊತ್ತಿಗೆ ಹಂತಿ ಮುಗಿಸಿ ಹುಲಗಣ ಹರಿಯಲಾಗುತ್ತದೆ. ನಂತರ ಸುಂಕ ಸಹಿತ ಕಾಳನ್ನು ಮೇಟಿಯ ಆಚೀಚೆ ಸರಿಸಿ ಮೆದೆ ಮಾಡಲಾಗುತ್ತದೆ. ಮಧ್ಯ ತೆರವಾದ ಕಣದ ಸ್ಥಳದಲ್ಲಿ ಮೆಟ್ನಾಲಿಕ್ ನಿಲ್ಲಿಸಿ ಅದರ ಮೇಲೆ ಹತ್ತಿ ತೂರಲಾಗುತ್ತದೆ.

ಸಂಜೆಯ ದಿನವೀಡಿ ತೂರಿ ಸಂಗ್ರಹಗೊಂಡ ಕಾಳನ್ನು ಮೇಟಿಗೆ ಒತ್ತಿ ಪೂಜೆ ಮಾಡಲಾಗುತ್ತದೆ. ಮರುದಿವಸ ಹೊತ್ತೇರುವುದರೊಂದಿಗೆ ಚೀಲ ತುಂಬಿ ಚಕ್ಕಡಿಯಲ್ಲಿ ರಾಶಿ ಹೇರಿಕೊಂಡು ಸಂಭ್ರಮದಿಂದ ಮನೆಗೆ ತರಲಾಗುತ್ತದೆ. ಕಾಳು ತುಂಬಿದ ಈ ಚೀಲಗಳನ್ನು ಕೆಲವರು ಮನೆಯ ಪಡಸಾಲೆಯಲ್ಲಿ, ಒಳ ಕೋಣೆಗಳಲ್ಲಿ ಹಾಕುತ್ತಾರೆ. ಇನ್ನು ಕೆಲವರು ಸುರಿವಿ ಹಗೆವು ಘರ್ಚಿಗಳಲ್ಲಿ ತುಂಬುತ್ತಾರೆ.

ಅಕ್ಕಡಿಕಾಳಿನ ರಾಶಿ ಬೇರೆ ಬೇರೆಯಾಗಿರುತ್ತದೆ. ಅಲಸಂದಿ, ಹೆಸರು, ಅವರಿ ಅಂತಹ ಬಳ್ಳಿಗಳಿಂದ ಕಾಯಿ ಹರಿದು ಮನೆಗೆ ತಂದು ಕೊಡತೆಯಿಂದ ಬಡಿದು ಕಾಳು ಉದುರಿಸಲಾಗುತ್ತದೆ. ತೊಗರಿಯನ್ನು ಕಣದಲ್ಲಿ ಬಡಿಗೆಯಿಂದ ಬಡಿದು ಕಾಳು ಉದರಿಸಲಾಗುತ್ತದೆ. ಹಳ್ಳಿಯಲ್ಲಿ ಹಂತಿ ಕಟ್ಟಿ ತುಳಸಿ ರಾಶಿ ಮಾಡಲಾಗುತ್ತದೆ. ನೆಟೆಶೇಂಗಾ ಬೆಳೆ ಮುಂಗಾರು ಹಂಗಾಮಿನಲ್ಲಿಯೇ ಬರುತ್ತದೆ. ಉಜ್ಜಿನಿಯ ಜಮೀನಿನಲ್ಲಿ ನೆಟೆಶೇಂಗಾ ವಿಶೇಷವಾಗಿ ಬೆಳೆಯುತ್ತಾರೆ. ಇದನ್ನು ಕೈಯಿಂದ ಕಿತ್ತು ಬಳ್ಳಿಯನ್ನು ಒಂದೆಡೆ ಒಟ್ಟಿ ನಂತರ ಕಾಯಿ ಹರಿದು ಸಂಗ್ರಹಿಸಲಾಗುತ್ತದೆ. ಶೇಂಗಾ ಬಳ್ಳಿಯ ಹೊಟ್ಟು ಮುಂಗಾರಿನ ವಿಶೇಷತೆಯೆನಿಸುತ್ತದೆ. ಉಜ್ಜನಿ ಹಿಂಗಾರಿಗೆ ಸಂಬಂಧಪಟ್ಟ ಭೂಮಿಯೇ ಹೆಚ್ಚಾಗಿರುವುದರಿಂದ ಮುಂಗಾರು ಪಸಲು ಸಾಕಷ್ಟು ಪ್ರಮಾಣದಲ್ಲಿ ಬರುವುದಿಲ್ಲ. ಈ ವಿಷಯದಲ್ಲಿ ಉಜ್ಜನಿ ಒಕ್ಕಲಿಗರು ಹಿಂಗಾರು ಬೆಳೆಗಳನ್ನೇ ಅವಲಂಬಿಸಿದ್ದಾರೆ.

**ಹಿಂಗಾರು :**

ಹಿಂಗಾರಿನ ಅವಧಿ ಮಗಿ ಮಳೆಯಿಂದ ಪ್ರಾರಂಭವಾಗುತ್ತದೆ. ಹಿಂಗಾರಿಯ ಭೂಮಿ ಉಳುಮೆ ಮುಂಗಾರು ಅವಧಿಯೊಂದಿಗೆ ಆಗಿದ್ದರೂ ಈಗ ಮತ್ತೊಮ್ಮೆ ಹೊಲಗಳನ್ನು ಹರಗಿ ಹಸನ ಮಾಡಿಕೊಳ್ಳುತ್ತಾರೆ. ಮಗಿ ಮಳೆಗೆ ಹತ್ತಿಯನ್ನು ಬಿತ್ತಲಾಗುತ್ತದೆ. ಇತ್ತೀಚೆಗೆ ಸೂರ್ಯಕಾಂತಿ, ತಂಬಾಕು ಹೆಚ್ಚಾಗಿದೆ. ಉತ್ತರಿ ಹಸ್ತ ಮಳೆಗೆ ಬಿಳಿಜೋಳವನ್ನು ಬಿತ್ತುತ್ತಾರೆ. ಮುಂಗಾರು ಜೋಳದಂತೆ ಬಿಳಿಜೋಳವನ್ನು ಕೂರಿಗೆ ಮುಖಾಂತರವೇ ಬಿತ್ತಲಾಗುತ್ತದೆ. ಆದರೆ ಅಕ್ಕಡಿ ಕಾಳಿನ

ಪ್ರಮಾಣ ಮುಂಗಾರಿನಲ್ಲಿದ್ದಷ್ಟು ಇಲ್ಲಿಲ್ಲ. ಬಿಳಿಜೋಳ ಮೊಳಕೆಯೊಡಿದು ಸಸಿಯಾಗಿ ಎತ್ತರ ಆಗುತ್ತಿದ್ದಂತೆ ಎಡೆ ಹೊಡೆಯುವುದು, ಕಳೆ ತೆಗೆಯುವುದು ಮುಂತಾದ ಕೆಲಸಗಳು ಮುಂಗಾರು ಅವಧಿಯಲ್ಲಿದ್ದಂತೆಯೇ ನಡೆಯುತ್ತದೆ. ಹಿಂಗಾರಿನ ಇನ್ನೊಂದು ಮುಖ್ಯ ಬೆಳೆ ದುಂಡುಗಡಲೆ, (ಕರಿಕಡಲೆ) ಎರಿ ಸಣ್ಣ ರೈತರು ಹತ್ತಿ, ಬಿಳಿಜೋಳ ಬಿತ್ತಿದರೆ ಕರಲು, ಕೆಂಪು (ಮಸಾರೆ) ಜಮೀನು ಇದ್ದವರು ಅಲ್ಲಿ ಇಲ್ಲಿ ಸ್ವಲ್ಪ ಗೋದಿಯನ್ನು ಬೆಳೆಯುತ್ತಾರೆ.

ಹಿಂಗಾರು ಬೆಳೆಗಳಲ್ಲಿ ಕೊನೆಯದು ಹತ್ತಿ ಯಾವ ಕುತ್ತಿಗೂ ಸಿಗದ ಹತ್ತಿ ಒಡೆಯುತ್ತ ಹೋದರೆ ಯುಗಾದಿ ದವನದ ಹುಣ್ಣಿಮೆಯವರೆಗೂ ಬಿಡಿಸಿಕೊಳ್ಳಬಹುದು. ಹತ್ತಿಯನ್ನು ಮೂರು ಕಂತಾಗಿ ಉಡಿಕಟ್ಟಿ ಬಿಡಿಸಿಕೊಳ್ಳಲಾಗುವುದು. ಮೊದಲು ಬೀಡು, ಮರಿಬೀಡು, ಕಡೆಬೀಡು, ಆ ಮೇಲೆ ಬಿಡಿಸಿಕೊಳ್ಳುವ ಹತ್ತಿ ಸಾಮಾನ್ಯವಾಗಿ ಸ್ವಚ್ಛವಿರುವುದಿಲ್ಲ. ಹಾಳ್ಹತ್ತಿ ಎನ್ನುತ್ತಾರೆ. ಹೀಗಾಗಿ ಕೃಷಿ ಕೆಲಸಗಳು ಮುಕ್ತಾಯ ಹೊಂದುತ್ತವೆ.

**ನೀರಾವರಿ :**

ಉಜ್ಜಿನಿ ಕ್ಷೇತ್ರದಲ್ಲಿ ನೀರಾವರಿ ಸಾಗುವಳಿ ಬಹಳ ಕಡಿಮೆ. ತೊಡಿದ ಬಾವಿಗಳಲ್ಲಿ ಕುಡಿಯುವ ನೀರು ಬಿಳುವುದೇ ಅಪರೂಪ. ಬೋರವೆಲ್‌ಗಳಿಗಿಂತ ಬೆದ್ದಲು ಕೃಷಿಯೇ ಹೆಚ್ಚು. ಆಧುನಿಕತೆ ಕಾಲಿಟ್ಟಂತೆ ಕೃಷಿಯಲ್ಲಿ ಸಾಕಷ್ಟು ಸುಧಾರಣೆಯಾಗಿದೆ. ಉಳುಮೆಗೆ ಟ್ರ್ಯಾಕ್ಟರ್, ಸರ್ಕಾರಿ ಗೊಬ್ಬರ, ಸಂಸ್ಕರಣೆಗೊಂಡ ಬೀಜ, ಕಾಳನ್ನು ಮಾಡಲು ಕಷ್ಟಪಡಬೇಕಾಗಿಲ್ಲ. ಅವುಗಳಿಗೆ ಮಿಷನ್‌ಗಳು ಆಧುನಿಕ ಕೊಡುಗೆಗಳಾಗಿ ಎಲ್ಲಾ ಕಡೆಯಿಂದ ಉಜ್ಜಿನಿಯಲ್ಲಿಯೂ ಹೊಸ ಗಾಳಿ ಬೀಸಿದೆ.

**ವರ್ಣ ವ್ಯವಸ್ಥೆ :**

ಸಮಾಜದ ರಚನೆಯ ಸ್ವರೂಪವನ್ನು ಗಮನಿಸಿದಂತೆ ಉದ್ಯೋಗ ವರ್ಣಗಳೆರಡೂ ತಳಕು ಹಾಕಿಕೊಂಡಿವೆ. ಆದ್ದರಿಂದ ವರ್ಣ ವ್ಯವಸ್ಥೆಯೆಂಬುದನ್ನು ಕೃಷಿ ಮತ್ತು ಕೃಷಿಕರನ್ನು ಅವಲಂಬಿಸಿದವರು ಎಂದು ಎರಡು ಗುಂಪಾಗಿ ವಿಂಗಡಿಸಿಕೊಂಡು ಅಭ್ಯಸಿಸುವುದು ಸುಲಭವೆನಿಸುತ್ತದೆ.

**ಕೃಷಿಕರು :**

ಕೃಷಿಯನ್ನೇ ಪ್ರಧಾನ ಉದ್ಯೋಗವನ್ನಾಗಿ ಮಾಡಿಕೊಂಡವರಲ್ಲಿ ಲಿಂಗಾಯತರು, ಕುರುಬರು, ನಾಯಕರು, ಹರಿಜನರು, ಚಲವಾದಿಗಳು, ಬಾರಿಕರು ಮುಖ್ಯರು. ತೀರಾ ಗೆರೆ ಕೊರೆದಂತೆ ಇವರೆಲ್ಲ ಒಕ್ಕಲುತನವನ್ನೇ ಮಾಡುತ್ತಾರೆಂದು ಹೇಳಲಾಗುವುದಿಲ್ಲ. ವ್ಯಾಪಾರ, ಕುರಿ ಸಾಗಾಣಿಕೆ ಮುಂತಾದ ಅನ್ಯ ಉದ್ಯೋಗಗಳನ್ನೇ ಕೆಲವರು ಮಾಡಿದರೂ ಈ ಜಾತಿಯ ಬಹು ಮಂದಿಯ ಉದ್ಯೋಗ ಒಕ್ಕಲುತನವೆಂದು ಹೇಳಬಹುದು. ಕೃಷಿಯನ್ನೇ ಅವಲಂಬಿಸಿರುವ ಇವರು ಸಹಜವಾಗಿ

ತಾವು ಬೆಳೆದಿರುವ ಕಾಳು-ಕಡಿ, ಮೇವನ್ನು ಇತರ ಜಾತಿಯವರಿಗೆ ಕೊಟ್ಟು ತಮ್ಮ ಕೃಷಿ ಜೀವನಕ್ಕೆ ಬೇಕಾಗುವ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾರೆ. ಈ ಕೊಡುಕೊಳ್ಳುವಿಕೆಯಲ್ಲಿ ಸಾಮಾನ್ಯವಾಗಿ ಅನುಕೂಲಸ್ಥರಂತೆ ಕಾಣುವವರು ಕೃಷಿಕರೇ ಎನ್ನಬೇಕು. ವಾಣಿಜ್ಯ ವೃತ್ತಿಯನ್ನು ಮಾಡುವವರು ಇವರಿಗಿಂತ ಶ್ರೀಮಂತರಿರಬಹುದು ಅದು ವ್ಯವಹಾರ ಇಲ್ಲಿ ಮುಖ್ಯವೆನಿಸುವುದು. ಪರಂಪರಾಗತವಾಗಿ ಹರಿದು ಬಂದಿರುವ ಸಹಕಾರ ಮತ್ತು ಅಸಹಕಾರದ ಮಧ್ಯೆಯೇ ಒಡಮೂಡಿಬರುವ ಗ್ರಾಮ ಸಂಘಟನೆ ಈ ಸಹಕಾರ ಸಂಘಟನೆಗಳಿಂದಾಗಿಯೇ ಇಡೀ ಗ್ರಾಮ ಒಂದು ಘಟಕವಾಗಿ ತೋರುತ್ತದೆ.

ಕೃಷಿ ಸಂಪ್ರದಾಯ ಆಚರಣೆಗಳನ್ನು ಕುರಿತಾಗಿ ಈಗಾಗಲೇ ವಿವರವಾಗಿ ನೋಡಲಾಗಿದೆ. ಕೃಷಿ ಸಂಬಂಧದ ಈ ವಿವರಣೆ ಕೃಷಿಗೈಯುವ ಎಲ್ಲರಿಗೂ ಅನ್ವಯಿಸುತ್ತದೆ. ಇನ್ನು ಮುಂದೆ ನಾವು ಮುಖ್ಯವಾಗಿ ಗಮನಿಸಬೇಕಾಗುವುದು ಈ ಮತದವರ ಮತೀಯ ವಿಚಾರಗಳನ್ನು ಇಲ್ಲಿ ಸಂಶೋಧನ ದೃಷ್ಟಿಗಿಂತ ವಿವರಣಾತ್ಮಕ ರೀತಿಯು ಮುಖ್ಯವಾಗಿಸಿಕೊಂಡಿದೆ. ಒಂದೊಂದು ಮತದವರ ಮಾಹಿತಿಗಾಗಿ ಆಯಾ ಮತದವರ ಸಂದರ್ಶನಗಳನ್ನೇ ಮುಂದು ಮಾಡಿಕೊಂಡು ವಿವರಿಸಲಾಗಿದೆ.

**ಕುರುಬ ಜನಾಂಗ :**

ಉಜ್ಜಿನಿಯಲ್ಲಿ ಕುರುಬ ಸಮಾಜವೇ ದೊಡ್ಡದು. ಕುರುಬರಲ್ಲಿ ಹತ್ತಿ ಕಂಕಣದವರು, ಉಣ್ಣೆ ಕಂಕಣದವರು ಎಂಬ ಎರಡು ಮುಖ್ಯ ಶಾಖೆಗಳು ಬರುತ್ತವೆ. ಮತ್ತೆ ಇವುಗಳಲ್ಲಿ ಬೇರೆ ಬೇರೆ ಬೆಡಗುಗಳು ಇದ್ದಾವೆ. ಸಂಬಂಧ ಬೆಳೆಸುವಾಗ ಕಂಕಣ ಮತ್ತು ಬೆಡಗುಗಳು ಮುಖ್ಯವಾಗಿ ಪರಿಗಣಿಸಲ್ಪಡುತ್ತವೆ. ಮೊದಲು ಕೇಳುವುದು ಕಂಕಣ. ಕಂಕಣ ಬೇರೆ ಬೇರೆಯಾಗಿದ್ದರೆ ಪರಸ್ಪರ ಬೀಗತನ ಬೆಳೆಸುವುದು ಸಾಧ್ಯವಿಲ್ಲ. ಅಲ್ಲಿ ಮೇಲು-ಕೀಳಿನ ತಾರತಮ್ಯವಿದೆ. ಆದ್ದರಿಂದ ಹತ್ತಿ ಕಂಕಣದವರು ಹತ್ತಿ ಕಂಕಣದಲ್ಲಿಯೇ ಬೇರೆ ಬೆಡಗಿನಲ್ಲಿ ಸಂಬಂಧಗಳನ್ನು ಬೆಳೆಸಬೇಕು. ಉಣ್ಣೆ ಕಂಕಣದವರು ಉಣ್ಣೆ ಕಂಕಣದಲ್ಲಿಯೇ ಬೇರೆ ಬೆಡಗಿನವರೊಂದಿಗೆ ಸಂಬಂಧ ಬೆಳೆಸಬೇಕು. ಇವರಿಬ್ಬರ ಅಂತರ ಮುಖ್ಯವಾಗಿ ಒಡೆದು ತೋರುವುದು ಮದುಮಕ್ಕಳಿಗೆ ಕೈಗೆ ನೂಲಿನ ಕಂಕಣ ಕಟ್ಟುತ್ತಾರೆ. ಎರಡನೆಯದಾಗಿ ಬೆಡಗು ಮುಖ್ಯವೆನಿಸುತ್ತವೆ. ಬೇರೆ ಬೇರೆ ಹೆಸರಿನ ಬೆಡಗುಗಳು ಎರಡು ಕಂಕಣಗಳಲ್ಲುಂಟು. ಬೆಡಗು ಬೇರೆ ಬೇರೆಯಾದರೆ ಮಾತ್ರ ಬೀಗತನ ಬೆಳೆಸಬಹುದು. ಒಂದೇಯಾದರೆ ಅಣ್ಣ-ತಮ್ಮಂದಿರಾಗುತ್ತಾರೆ ಎಂದು ಅಂದುಕೊಳ್ಳುತ್ತಾರೆ.

ಇವರ ಕುಲದೇವರು ಬೀರಪ್ಪನಿದ್ದರೂ, ಇವರು ಹನುಮಪ್ಪ, ಮರುಳಸಿದ್ಧ, ಮೈಲಾರಲಿಂಗ ಎಲ್ಲಾ ದೇವರಲ್ಲಿಯೂ ನಂಬಿಕೆಯುಳ್ಳವರಾಗಿದ್ದಾರೆ. ಕುರುಬ ಸಮುದಾಯದಲ್ಲಿರುವ ಮದುವೆ ಸಂಪ್ರದಾಯಗಳೆ ಇಲ್ಲಿಯ ಕುರುಬ ಸಮಾಜದಲ್ಲಿವೆ. ಸಮಾಜದ ಪ್ರಮುಖರು ಸೇರಿ ಹೆಣ್ಣು ಖಾಯಂ ಮಾಡುವುದು. ಮದುವೆಯಲ್ಲಿ ಬೀಗರನ್ನು ಎದುರುಗೊಳ್ಳುವುದು, ಐರಣಿ ತರುವುದು, ಬಾಸಿಂಗ ತರುವುದು ಇವೆಲ್ಲ ಮದುವೆಗೆ ಸಂಬಂಧಿಸಿದ ಆಚರಣೆಗಳು. ಹಿಂದಿನ ಕಾಲದಲ್ಲಿ ಈ ಸಮಾಜದಲ್ಲಿ ಇದ್ದ ತೆರವು ತೆಗೆದುಕೊಳ್ಳುವ ಪದ್ಧತಿ ಈಗಿಲ್ಲ. ವರದಕ್ಷಿಣೆಯ ಗಾಢತೆ ಇನ್ನು ಅಷ್ಟಾಗಿಲ್ಲ. ಬಾಂಡಿ, ಬಂಗಾರ ಮುಂತಾದವುಗಳನ್ನು ಕೊಡಲಾಗುತ್ತದೆ. ಎಲ್ಲೂ ಒಬ್ಬ ಇಬ್ಬರು ಓದಿದ ಯುವಕರು ಲಕ್ಷದ ಮಾತುಗಳನ್ನು ಮಾತನಾಡಿ ಪಡೆಯುವುದುಂಟು. ಒಟ್ಟಾರೆಯಾಗಿ ವರೋಪಚಾರದ ಕಡೆಗೆ ಹೆಚ್ಚಿನ ಗಮನ ಕೊಡುವುದು ಬೆಳೆಯುತ್ತಿದೆ.

ಕೂಸು ಹುಟ್ಟಿದಾಗ ಕೂಸಿಗೆ ಹನ್ನೊಂದು ಅಥವಾ ಹದಿಮೂರನೆಯ ದಿನಕ್ಕೆ ಹೆಸರಿಡಲಾಗುತ್ತದೆ. ತೀರಿಕೊಂಡಾಗ ಹುಗಿಯುತ್ತಾರೆ. ತೀರಿಕೊಂಡ ವ್ಯಕ್ತಿಗೆ ತನ್ವ (ಪಾಂಡುರೋಗ) ಇದ್ದರೆ ಬೆಂಕಿಯಲ್ಲಿ ಸುಡುತ್ತಾರೆ. ವ್ಯಕ್ತಿ ತೀರಿಕೊಂಡ ತಿಂಗಳೊಳಗಾಗಿ ಒಂದು ದಿನ ಸಿಹಿ ಅಡುಗೆ ಮಾಡಿ ದೈವದೊಳಗೆ ತೆಗೆದುಕೊಳ್ಳುವ ಪದ್ಧತಿ ಇದೆ. ಕುರುಬ ಸಮಾಜ ಮತ್ತು ವಾಲ್ಮೀಕಿ ಸಮಾಜದ ಮತೀಯ ಆಚರಣೆಗಳಲ್ಲೂ ತುಂಬಾ ಹೋಲಿಕೆಗಳಿರುವುದು ಗಮನಾರ್ಹದ ವಿಷಯವಾಗಿದೆ.

ಒಕ್ಕಲುತನ, ಕುರಿಕಾಯುವುದು ಇವು ಕುರುಬ ಸಮಾಜದವರ ಮುಖ್ಯ ಉದ್ಯೋಗಗಳು. ೧೦೦-೨೦೦ ಕುರಿಗಳನ್ನು ಮಾಡಿಕೊಂಡು ಕೆಲವರು ಜೀವನ ಸಾಗಿಸುತ್ತಾರೆ. ಕುರಿ ಮೇಯಿಸಲು ಚಿರಬಿ ಅರಣ್ಯಕ್ಕೆ, ಚಿಕ್ಕ ಉಜ್ಜಿನಿ ಗುಡ್ಡಗಳು ಅನುಕೂಲವಾಗಿದ್ದರೂ ಇತ್ತೀಚಿನ ಕಟ್ಟೆಳೆಗಳಿಂದ ಕುರಿಗಳನ್ನು ಮೇಯಿಸುವುದು ಕಷ್ಟವಾದರೂ ಜೀವನ ಹೇಗೋ ನಡೆಯುತ್ತದೆ. ಉಜ್ಜಿನಿ ಸುತ್ತಮುತ್ತಲ ಹಳ್ಳಿಗಳಿಗೆ ಮೇಯಿಸಿಕೊಂಡು ಬಂದು ರಾತ್ರಿಗೆ ಕುರಿ ಹಟ್ಟಿಗೆ ಕೂಡುತ್ತಾರೆ. ಕುರಿಯ ಹಾಲು ವ್ಯಾಪಾರ ಕಡಿಮೆ. ಮನೆ ಅಥವಾ ಮರಿಗೆ ಕುಡಿಯಲು ಬಿಡುವುದು ಹೆಚ್ಚು. ಕುರಿ ಹಿಂಡು ಬೆಳೆಯಿಸಿ ಅಡಚಣೆ ಇದ್ದಾಗ ಮಾರುತ್ತಾ ಹೋಗುವುದೇ ಉಪ ಜೀವನದ ಮಾರ್ಗವೆನಿಸಿದೆ. ವರ್ಷಕ್ಕೊಮ್ಮೆ ಕುರಿಯ ಉಣ್ಣೆ ಕತ್ತರಿಸಿ ಮಾರಲಾಗುವುದು. ಉಣ್ಣೆಯಿಂದ ಉತ್ತಮ ಮಟ್ಟದ ಕಂಬಳಿಯನ್ನು ಉಜ್ಜಿನಿಯಲ್ಲಿಯೇ ತಯಾರಿಸಲಾಗುವುದು ಎಂದು ಉಜ್ಜಿನಿ ನರಸಪ್ಪ ಹೇಳುತ್ತಾರೆ.

**ಲಿಂಗಾಯತರು :**

ಉಜ್ಜಿನಿಯಲ್ಲಿ ಲಿಂಗಾಯತರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆ ನಿಂತಿರುವರು. ಅವರಲ್ಲೂ ಕೂಡ ಒಳ ಪಂಗಡಗಳಿಗೆ ಅವುಗಳೆಂದರೆ:

೧. ಶೀಲವಂತ ಬಣಜಿಗರು

೨. ಪಂಚಮಸಾಲಿಯವರು

೩. ಲೋಕ ಬಳಕಿಯವರು

೪. ಸಾದು ಲಿಂಗಾಯತರು

ಶೀಲವಂತ ಬಣಜಿಗರು, ಪಂಚಮಸಾಲಿಯವರು, ಲೋಕ ಬಳಕಿನವರು ಈ ಹಿಂದೆ ಸಂಬಂಧಗಳು ನಡೆಯುತ್ತಿರಲಿಲ್ಲ. ಈಗ ನಡೆಯುತ್ತವೆ. ಆದರೆ ನಾಲ್ಕನೆಯ ಸಾದು ಲಿಂಗಾಯತರು ಇವರ ಜೊತೆ ಮದುವೆ ಆಗುವುದಿಲ್ಲ. ಇವರು ತಮ್ಮದೆ ಕುಲದಲ್ಲಿ ಮದುವೆಯಾಗುತ್ತಾರೆ. ಆದರೆ ಇವರು ಎಲ್ಲಾ ಆಚಾರ-ವಿಚಾರಗಳು ಒಂದೆಯಾಗಿರುತ್ತವೆ. ಕೂಸು ಹುಟ್ಟಿದಾಗ ಹುಟ್ಟಿದ ಶಾಸ್ತ್ರ ಮಾಡಿ ೧೩ನೆಯ ದಿನಕ್ಕೆ ಹೆಸರು (ನಾಮಕರಣಶಾಸ್ತ್ರ) ಮಾಡುತ್ತಾರೆ. ಈ ಸಂದರ್ಭದಲ್ಲಿ ಕೂಸಿಗೆ ಅತ್ತೆಯಾದವರು ಹೆಸರನ್ನು ಕರೆಯಲಾಗುತ್ತದೆ. ಮೊದಲು ಸ್ವಾಮಿಗಳು ನಾಮಕರಣದ ತರುವಾಯ ಅತ್ತೆ ನಾಮಕರಣ ಮಾಡುತ್ತಾಳೆ. ಹೆಸರಿಡುವ ಹೊತ್ತಿಗೆ ಓಣಿಯ ಹೆಣ್ಣು ಮಕ್ಕಳನ್ನೆ ಕರೆಯುವುದು ವಾಡಿಕೆ. ಅತ್ತೆ ಕೂಸಿನ ಕಿವಿಯಲ್ಲಿ ಹೆಸರು ಊದುತ್ತಿರುವಂತೆ ಸುತ್ತ ನಿಂತವರು ಅವಳ ಬೆನ್ನ ಮೇಲೆ ಚಪ್ಪರಿಸುತ್ತಾರೆ. ಸೋದರತ್ತೆಯೊಬ್ಬಳೇ ಅಲ್ಲ, ಅತ್ತೆ ಸಂಬಂಧದ ಮತ್ತೆ ಕೆಲವರು ಕೂಸಿಗೆ ಹೆಸರಿಡಬಹುದು. ಗುಗ್ಗರಿ ಈ ಸಂದರ್ಭದಲ್ಲಿ ವಿಶೇಷ.

ಜನನ, ಮದುವೆಂಬಂಥ ಸಂದರ್ಭಗಳ ಆಚರಣೆಗಳು ಎಷ್ಟೋ ಮರೆಯಾಗಿವೆ, ಬದಲಾಗಿವೆ. ಮುಂಚೆ ಇವೆಲ್ಲ ಹೇಗೆ ಸಾಗಬೇಕೆಂಬ ಕಟ್ಟುಪಾಡುಗಳಿದ್ದವು. ಈಗ ಯಾರು ಅಷ್ಟೊಂದು ತೀವ್ರವಾಗಿ ಪರಿಗಣಿಸುವುದಿಲ್ಲ. ಇವರಲ್ಲಿ ಶವವನ್ನು ಹೂಳುವ ಪದ್ಧತಿ ಇದೆ. ಇಲ್ಲಿರುವ ೪ ಜನಾಂಗ ಲಿಂಗಾಯತರಲ್ಲಿ ೨ ಬಣಜಗರು ಸ್ವಾಮಿಗಳನ್ನು ಕರೆಯಿಸಿಕೊಳ್ಳುವಲ್ಲಿ ಯಾವುದೇ ಬೇಧ-ಭಾವವಿಲ್ಲ. ಜನನ, ಮದುವೆ, ಮರಣಗಳಂಥ ಸಂದರ್ಭಗಳಲ್ಲಿ ಸ್ವಾಮಿಗಳನ್ನು ಕರೆಯುತ್ತಾರೆ. ಸಾಧು ವೀರಶೈವರಲ್ಲಿ ಸ್ವಲ್ಪ ಭಿನ್ನತೆಗಳು ಕಂಡುಬರುತ್ತವೆ. ಆದರೆ ಇವರ ದೇವರುಗಳು ಬಹುತೇಕ ಎಲ್ಲಾ ಒಂದೆಯಾಗಿವೆ. ಶ್ರೀ ಮರುಳಸಿದ್ಧೇಶ್ವರ ಕೊಟ್ಟೂರೇಶ್ವರ, ವೀರಭದ್ರೇಶ್ವರ, ಬಸವಣ್ಣ ಇವೆಲ್ಲ ಇವರು ನಡೆದುಕೊಳ್ಳುವ ದೇವರು ಮತ್ತು ಇವರ ಮನೆ ದೇವರುಗಳು ಎಂದೇ ಹೇಳಬಹುದು. ಇಲ್ಲಿಯ ಲಿಂಗವಂತರ ಮುಖ್ಯ ಉದ್ಯೋಗ ಒಕ್ಕಲುತನ ಮತ್ತು ಕೆಲವರು ವ್ಯಾಪಾರವನ್ನು ಮಾಡುತ್ತಾರೆ.

**ಪರಿಶಿಷ್ಟ ಜಾತಿಯವರು :**

ಉಜ್ಜನಿಯಲ್ಲಿ ಪರಿಶಿಷ್ಟ ಜಾತಿಯವರು ವಾಸಿಸುತ್ತಿದ್ದಾರೆ. ಇವರು ಕೂಡ ಕೂಸು ಹುಟ್ಟಿದಾಗ ಹುಟ್ಟಿದ ಶಾಸ್ತ್ರ ಮಾಡಿ ೧೩ನೆಯ ದಿನಕ್ಕೆ ಹೆಸರು ಇಡುತ್ತಾರೆ. ಮದುವೆಯಂಥ ಆಚರಣೆಗಳನ್ನು

ಬಹಳ ಸಂಪ್ರದಾಯಬದ್ಧವಾಗಿ ಆಚರಿಸುತ್ತಾರೆ. ಆದರೆ ಈ ಜನಾಂಗದಲ್ಲಿ ಈ ದಿನಮಾನದಲ್ಲಿ ಬಹಳಷ್ಟು ಬದಲಾವಣೆಗಳು ಆಗಿವೆ. ಮೂಲತಃ ಬಹಳ ಜನ ಅನಕ್ಷರಸ್ಥರು ಇದ್ದರೂ, ಈಗ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸಿದ್ದಾರೆ. ಇದರ ಸಲುವಾಗಿ ಶಿಕ್ಷಕರು, ಪೋಲೀಸ್ ಮುಂತಾದ ಇಲಾಖೆಗಳಲ್ಲಿ ಪರಿಶಿಷ್ಟ ಹುಡುಗರು ಸೇವೆ ಸಲ್ಲಿಸುತ್ತಿದ್ದಾರೆ. ತೀರಿಕೊಂಡಾಗ ಕಳೆಬರಹವನ್ನು ಹುಗಿಯುತ್ತಾರೆ. ತನ್ನು (ಪಾಂಡುರೋಗ) ಇದ್ದರೆ ಸುಡುತ್ತಾರೆ. ಉಜ್ಜನಿಯಲ್ಲಿ ವನೆತವ್ವನ ಗುಡಿ ಬಹಳ ಸುಂದರವಾಗಿ ಕಟ್ಟಿಸಿಕೊಂಡಿದ್ದಾರೆ. ಅದರ ಜಾತ್ರೆಯನ್ನು ನಡೆಸುತ್ತಾರೆ.

**ವಾಲ್ಮೀಕಿ ಜನಾಂಗ :**

ಉಜ್ಜನಿಯಲ್ಲಿ ವಾಲ್ಮೀಕಿ (ನಾಯಕ) ಜನಾಂಗದವರು ಕಡಿಮೆ ಪ್ರಮಾಣದಲ್ಲಿದ್ದು, ಕೆಲವರಿಗೆ ಭೂಮಿ, ಆಸ್ತಿ ಇದ್ದರೆ, ಇನ್ನೂ ಕೆಲವರು ಬೇರೆ ಬೇರೆ ಉದ್ಯೋಗಗಳನ್ನು ಮಾಡಿ ಬದುಕುತ್ತಿದ್ದಾರೆ. ಇವರ ಮನೆ ದೇವರು ಬಹಳವಾಗಿ ನಾಯಕನಟ್ಟಿ ತಿಪ್ಪೇಸ್ವಾಮಿ, ಕಂಪ್ಲೆಪ್ಪ, ಆಂಜನೇಯ, ಉಚ್ಚಂಗೆಮ್ಮ ಮನೆ ದೇವರುಗಳು ಆಗಿದ್ದಾವೆ. ಮದುವೆ, ಮಂಗಳ ಪ್ರಸಂಗಗಳಲ್ಲಿ ಸಾಮಾಜಿಕ ಸಹಕಾರ ವಿಶೇಷವಾಗಿರುತ್ತದೆ. ಹೆಣ್ಣು-ಗಂಡು ಗಟ್ಟಿ ಮಾಡುವಾಗ ಸಮಾಜದ ಪ್ರಮುಖರು ಕೂಡಿದ ಸಮಯದಲ್ಲಿ ಒಂದಿಷ್ಟೆ ಹಣವನ್ನು ದೈವಕ್ಕೆ ಕೊಡಲಾಗುವುದು. ಇಲ್ಲಿ ದೈವ ಎಂದರೆ ಸಮಾಜ ಎಂದರ್ಥ. ಕೂಡಿದ ಸಮಾಜ ಬಾಂಧವರು ದೇವರಿಗೆ ಸಮಾನರು ಎನಿಸುತ್ತದೆ.

ಈ ಹಣ ಸಮಾಜಕ್ಕೆ ಸಲ್ಲುವ ಮರ್ಯಾದೆ. ಇಂಥ ಯಾವುದೇ ಕಾರ್ಯಕ್ರಮವಿರಲಿ ಸಮಾಜಕ್ಕೆ ಒಂದು ಪಾಲು ಹೋಗುತ್ತದೆ. ಮದುವೆಗಿಂತ ಮೊದಲು 'ಹಿರಿಯರಿಗೆ ಮಾಡುವುದು' ಹಿರಿಯರನ್ನು ಮಾಡಿದ ದಿನ ಮಾಂಸದ ಅಡುಗೆ ಮಾಡುತ್ತಾರೆ. ಮದುವೆ ಸಮಾರಂಭಕ್ಕೆ ವೀರಶೈವ ಜಂಗಮರನ್ನು ಕರೆಯುತ್ತಾರೆ. ಸುರಿಗಿ ಪದ್ಧತಿ ಇದೆ. ಮೊದಲೆಲ್ಲ ಮೂರು ದಿನಗಳ ಮದುವೆ ಪದ್ಧತಿಯಿತ್ತು, ಕ್ರಮೇಣ ಸಂಕ್ಷಿಪ್ತಗೊಳ್ಳುತ್ತ ನಡೆದಿದೆ. ಅಕ್ಕಿಕಾಳು, ಜೋಳದ ಕಾಳು ಎರಡನ್ನು ಅಥವಾ ಅಕ್ಕಿ ಮಾತ್ರವನ್ನು ಅಕ್ಷತೆಯಾಗಿ ತಯಾರಿಸುತ್ತಾರೆ.

ಮದುವೆಯಲ್ಲಿ ತಮ್ಮ ತಮ್ಮ ಶಕ್ತಾನುಸಾರ ಜನರಿಗೆ ಊಟಕ್ಕೆ ಮಾಡಿಸಲಾಗುವುದು. ನ್ಯಾಯ ನಿಬಾದಿಗಳು ಬಂದರೆ ಹಿರಿಯರೆಲ್ಲ ಸೇರಿ ವಿಷಯಕ್ಕೆ ಸಂಬಂಧಪಟ್ಟಂತೆ ಚರ್ಚೆ ನಿರ್ಣಯಗಳು ನಡೆಯುತ್ತವೆ. ಈ ಸಮಾಜದಲ್ಲಿ ತೀರಿಕೊಂಡಾಗ ಹುಗಿಯುವುದು, 'ಇಸಬಾಯಿ' ತೊಳೆಸುವುದು ಮೂರು ದಿನದ ಕಾರ್ಯ ಮುಂತಾದ ಕಾರ್ಯಕ್ರಮಗಳಿರುತ್ತವೆ. ತೀರಿಕೊಂಡ ವ್ಯಕ್ತಿಗೆ 'ತಲೆಬಳು' ಕೊಡುವನೊಬ್ಬ ಇರುತ್ತಾನೆ. ಒಳ್ಳೆಯ ದಿನ ನೋಡಿ ಈತನ ತಲೆಬೋಳಿಸಿ, ಹೊಸ ಬಟ್ಟೆ ತೊಡಿಸಿ, ಸಿಹಿ ಊಟ ಮಾಡಿಸಬೇಕು. ತೀರಿಕೊಂಡವರ ಮನೆಯಲ್ಲಿ ತಿಂಗಳೊಳಗಾಗಿ ಸಿಹಿ ಅಡುಗೆ ಮಾಡಿ

ದಿವಸ (ತಿಥಿ) ಮಾಡುತ್ತಾರೆ. ಹೆಚ್ಚು ಜಾತಿಗಳಲ್ಲಿ ಈ ಆಚರಣೆ ಇರುವಂತೆ ವಾಲ್ಮೀಕಿ ಸಮಾಜದಲ್ಲಿಯೂ ಇದೆ. ತೀರಿಕೊಂಡ ದಿನ ಹೆಣದ ಮೇಲೆ ಬರುವ ತೆಂಗಿನಕಾಯಿ, ಊದಿನಕಡ್ಡಿ, ಹೂವಿನಹಾರ ತರುತ್ತಾರೆ. ಈ ರೀತಿಯ ಆಚಾರ, ಸಂಪ್ರದಾಯಗಳನ್ನು ನಾಯಕ ಜನಾಂಗದವರು ಉಳಿಸಿಕೊಂಡು ಬಂದಿದ್ದಾರೆ ಎಂದು ಉಜ್ಜನಿ ತಳವಾರ ಸಿದ್ಧಲಿಂಗಪ್ಪ ಹೇಳುತ್ತಾರೆ.

**ಬಡಿಗರು–ಕಂಬಾರರು :**

"ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ ವೇದವನು ಓದಿ ಹಾರವನಾದ" ಎನ್ನುವಂತೆ ಇವರುಗಳ ಕಸುಬುಗಳ ಮೇಲೆಯೇ ಇವರು ಜಾತಿಗಳು ಸೃಷ್ಟಿಯಾಗಿವೆ. ಉಜ್ಜನಿಯಲ್ಲಿ ಇವರು ಹಿಂದಿನಂತೆ ಆಯಾ ಪದ್ಧತಿಯ ಮೇಲೆ ವೃತ್ತಿಯನ್ನು ಮಾಡುವುದು ನಿಲ್ಲಿಸಿದ್ದಾರೆ. ಇವರು ಹಣಕ್ಕೆ ಈ ಕೆಲಸವನ್ನು ಮಾಡುತ್ತಾರೆ. ಹಿಂದೆ ಬಡಿಗತನ, ಕಂಬಾರಿಕೆ ಎರಡನ್ನು ಮಾಡಿದರು. ಕಂಬಾರಿಕೆಯನ್ನು ಮಾತ್ರ ಆಯ ಮಾಡುವ ಬಡಿಗ ಅಥವಾ ಕಂಬಾರನಿಗೆ ವರ್ಷಕ್ಕೊಮ್ಮೆ ನಿಗದಿಪಡಿಸಿದ ಕಾಳನ್ನೇ ಕೊಡಲಾಗುತ್ತಿತ್ತು. ಕಂಬಾರನಿಗೆ ಎತ್ತಿನ ಒಕ್ಕಲಿಗ ೨೨ ಸೇರು ಜೋಳ, ೨ ಸೇರು ಕಡ್ಲಿ, ೫ ಸೇರು ತೊಗರೆ ಕೊಡಬೇಕಾಗಿತ್ತು. ಬಡಿಗನಿಗೆ ೩೫ ಸೇರು ಜೋಳ, ತೊಗರಿ, ಕಡ್ಲಿ ಕೊಡಬೇಕು. ಇಷ್ಟಲ್ಲದೆ ಹೊಲದಲ್ಲಿ ಮೇವು ತೆನೆಯನ್ನು ಕೊಡಲಾಗುತ್ತಿತ್ತು.

ಇವರ ಮನೆ ದೇವರು ತಿಂಥಿಣಿ ಮೌನೇಶ, ಕಾಳಮ್ಮ ಇವರಲ್ಲಿ ಬೇರೆ ಬೇರೆ ಗೋತ್ರಗಳಿವೆ. ಬೀಗತನ ಮಾಡುವಾಗ ಗೋತ್ರಗಳು ಬೇರೆ ಬೇರೆಯಾಗಬೇಕು.

ಇಲ್ಲಿ ಕೆಲವರು ಸ್ವಗೋತ್ರದವರು ಇದ್ದಾರೆ. ಬೇರೆ ಬೇರೆ ಗೋತ್ರದವರೂ ಇದ್ದಾರೆ. ಸ್ವ ಗೋತ್ರದವರು ಅಣ್ಣ–ತಮ್ಮಂದಿರೆನಿಸುತ್ತಾರೆ. ಅನ್ಯ ಗೋತ್ರದವರು ಕೆಲವರು ಸಂಬಂಧ ಬೆಳೆಸಿಕೊಂಡ ಬೀಗರೂ ಆಗಿದ್ದಾರೆ. ಇವರು ಕೂಸು ಹುಟ್ಟಿದಾಗ ೫ನೆಯ ದಿನಕ್ಕೆ ಹುಟ್ಟಿದ ಶಾಸ್ತ್ರ ಮಾಡಿ ಮುಂದೆ ಮೂಹರ್ತ ನೋಡಿ ಒಳ್ಳೆ ದಿನದಂದು ತಿಂಗಳೊಳಗಾಗಿ ಹೆಸರಿಡುವ ಪದ್ಧತಿ ಇದೆ.

**ಅಗಸರು :**

ಉಜ್ಜನಿಯಲ್ಲಿ ಅಗಸರು ತಮ್ಮ ಮೂಲ ಉದ್ಯೋಗವನ್ನು ಮಾಡಿದರೆ, ಇನ್ನೂ ಕೆಲವರು ಅದನ್ನು ಬಿಟ್ಟು ಒಕ್ಕಲುತನವನ್ನು ಆಶ್ರಯಿಸಿದ್ದಾರೆ. ಇವರು ಮಡಿವಾಳ ಮಾಚಿದೇವನ ಕುಲದವರು. ಇವರ ದೇವರು ಎಲ್ಲಮ್ಮ, ಆಂಜನೇಯ, ಮರುಳಸಿದ್ಧೇಶ್ವರ ಮುಂತಾದ ದೇವರಗಳನ್ನೇ ಪೂಜಿಸುವುದು ಬೆಳೆಯುತ್ತಿದೆ. ಆದರೆ ಇವರಲ್ಲಿ ಬೆಡಗುಗಳು ಇಲ್ಲ. ಕುಲದೇವರಿದ್ದರೆ ಸಾಕು ಮದುವೆ, ಸಂಪ್ರದಾಯಗಳು ನಡೆದು ಹೋಗುತ್ತವೆ. ಎಲ್ಲಾ ಜನಾಂಗದಂತೆ ಇವರು ಕೂಡ ಕೂಸು ಹುಟ್ಟಿದಾಗ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಮದುವೆ, ಮರಣ ಹೊಂದಿದ್ದಾಗ ಬಹುತೇಕ ಒಂದೇ ತರಹದ ಆಚರಣೆಗಳು ಪಾಲಿಸುತ್ತಾರೆ.

**ಕ್ಷೌರಿಕರು :**

ಇಲ್ಲಿ ಕ್ಷೌರಿಕರು ತಮ್ಮ ಮೂಲ ಉದ್ಯೋಗವನ್ನು ಮಾಡಿದರೆ, ಇನ್ನು ಕೆಲವರು ಇತರೆ ಕಸಬುಗಳನ್ನು ಮಾಡುತ್ತಾರೆ. ಮುಂಚೆ ಆಯಕ್ಕೆ ಈ ಕೆಲಸವನ್ನು ಮಾಡುತ್ತಿದ್ದರು. ಈಗ ಹಣಕ್ಕೆ ಈ ಕೆಲಸವನ್ನು ಮಾಡುತ್ತಾರೆ. ಕೂಸು ಹುಟ್ಟಿದಾಗ ಲಿಂಗ ಕಟ್ಟುತ್ತಾರೆ. (ಲಿಂಗಾಯತ ಕೆಲಸೆರು) ಈ ಸಂದರ್ಬದಲ್ಲಿ ವಿಧಿ–ವಿಧಾನಗಳನ್ನು ಸ್ವಾಮಿಗಳೇ ಆದವರು ನಡೆಸಿಕೊಡುತ್ತಾರೆ. ನಂತರ ನಾಮಕರಣ ಮಾಡಲಾಗುತ್ತದೆ. ಮದುವೆಯಲ್ಲಿ ಐರಾಣಿ ತರುವುದು ಮುಂತಾದ ಆಚರಣೆಗಳು ಬಳಕೆಯಲ್ಲಿದ್ದಾವೆ. ಮುಂಚೆ ಇದ್ದ ಮದುವೆ ಆಚರಣೆಗಳು ಈಗ ಕ್ರಮೇಣ ಮರೆಯಾಗುತ್ತವೆ.

**ನೇಕಾರರು :**

ಉಜ್ಜನಿಯ ಗ್ರಾಮದ ಜನರ ವೃತ್ತಿಕಾರರಲ್ಲಿಯೇ ಅತ್ಯಧಿಕ ಸಂಖ್ಯೆಯಲ್ಲಿರುವವರೆಂದರೆ ನೇಕಾರರು. ನೇವರರು, ನೇಯುವವರು, ದೇವಾಂಗದವರು, ಪದ್ಮಸಾಲಿಯವರು, ಜಾಡರು, ಜೇಡರು ಎಂದು ಕರೆಯುತ್ತಾರೆ. ದೇವರ ದಾಸಿಮಯ್ಯನ ಕುಲ ಸಂಬಂಧವನ್ನು ಸೂಚಿಸಿದರೆ ದೇವಾಂಗ ಎಂಬುದು ಋಷಿಯ ಮೂಲವನ್ನು ಹೇಳುತ್ತದೆ. ಬಟ್ಟೆಯನ್ನು ನೇಯುವುದರಿಂದ ಇವರನ್ನೇ ನೇಕಾರರೆಂದು ಕರೆಯಲಾಗಿದೆ.

ಉಜ್ಜನಿಯಲ್ಲಿರುವ ನೇಕಾರರು ನಾನಾ ವಿಧದ ಸೀರೆಗಳನ್ನು ನೇಯುತ್ತಾರೆ. ಸ್ತ್ರೀ, ಪುರುಷರು, ಮಕ್ಕಳೆಲ್ಲರು ನೇಯ್ಗೆಯ ಕೆಲಸವನ್ನು ಮಾಡುತ್ತಾರೆ. ನೂಲನ್ನು ತೊಳೆದು ಹಿಂಜಿ, ಹಿಂಡಿ, ಒಣಗಿಸಿ ಚಕ್ರದ ಸಹಾಯದಿಂದ ಬಿಡಿಸಿ ಲಾಡಿಸಿದ್ಧಪಡಿಸಿಕೊಂಡು ಉಂಕಿಯಿಂದ ತಿದ್ದಿ–ತೀಡಿ, ಹರಿದ ಎಳೆಗಳನ್ನು ಜೋಡಿಸಿ, ಮನೆಗೊಯ್ದು ಮಗ್ಗದಲ್ಲಿ ಜೋಡಿಸಿ ನೇಯ್ದು ಸೀರೆಯನ್ನು ಸಿದ್ಧಪಡಿಸುತ್ತಾರೆ. ನೇಯ್ಗೆಯ ಸಮಯದಲ್ಲಿ ಬೇಕಾಗುವ ಸಲಕರಣೆಗಳೆಂದರೆ ಹಾಸಹರಿ, ಗಣಿ, ಶೆಟರ್, ಕುಂಟಿ, ಅಡದಂಡಿಗಿ, ಕಂಬ, ಗಾಡ, ಲಾಳಿ, ತಂತಿಬೀಜಾ, ರೀಲ್ ಇತ್ಯಾದಿ ನೇಕಾರರು ಪ್ರಮುಖವಾಗಿ ಟೋಪಿನ ತೆನೆ, ಸೀರೆ, ಪಂಚೆ, ಟವಲ್ ಮುಂತಾದ ವಸ್ತ್ರಗಳನ್ನು ನೆಯುತ್ತಾರೆ. ಅವುಗಳನ್ನೇ ಮಾರಾಟ ಮಾಡಿ ಜೀವನ ನಡೆಸುತ್ತಾರೆ.

**ಬ್ರಾಹ್ಮಣ, ಮುಸಲ್ಮಾನರು, ವೈಶರು, ಬಾರಿಕರು, ಚಲವಾದಿಗಳು, ಕೊರವರು :**

ಇತರ ಜನರು ವೃತ್ತಿಕಾರರು ಕೈಗೊಂಡು ಬಂದಿರುವಂತಹ ಅನುವಂಶಿಕ ವೃತ್ತಿಯಿಂದ ಹೊರತಾಗಿ ಜನರ ಕೆಲವು ವರ್ಗಗಳಿವೆ. ಕ್ರಮವಾಗಿ ಬ್ರಾಹ್ಮಣರು, ಮುಸಲ್ಮಾನರು ಮೂಲದಲ್ಲಿ ಒಕ್ಕಲುತನವೇ ಪ್ರಧಾನ ವೃತ್ತಿಯಾಗಿದೆ. ಚಲವಾದಿಗಳು ಮದುವೆ ಸಮಯದಲ್ಲಿ ಓಲಗ (ಶಹನಾಯಿ) ಊದಿದರೆ, ಬಾರಿಕರು ಆಯಗಾರಿಕೆ (ಇವರು ನೀರು ಗಂಟಿಗಳಾಗಿದ್ದಾರೆ) ಮಾಡಿದರೆ, ಕೊರವರು ಬುಟ್ಟಿ, ತಟ್ಟಿ, ಚಾಪೆ ಹೆಣೆಯುತ್ತಾರೆ.

ಒಟ್ಟಿನಲ್ಲಿ ಉಜ್ಜಿನಿಯ ಗ್ರಾಮದಲ್ಲಿ ನೆಲೆನಿಂತಿರುವ ೧೮ ವರ್ಗಗಳಲ್ಲಿ ಬಹುಪಾಲು ವರ್ಗಗಳು ಅನುವಂಶಿಕ ವೃತ್ತಿಯಲ್ಲಿಯೇ ನಿರತರಾಗಿರುವುದು ಕಂಡುಬಂದರೂ ಅವುಗಳಿಂದ ಮುಕ್ತಿ ಪಡೆದು ಆಧುನಿಕ ವೃತ್ತಿಯಲ್ಲಿ ತೊಡಗಿಕೊಂಡಿರುವವರ ಸಂಖ್ಯೆಯೇ ಹೆಚ್ಚೆನ್ನಬೇಕು. ಅಂದರೆ ಕಾಳು-ಕಡಿ, ಹಣ್ಣು, ತರಕಾರಿ, ಕಿರಾಣಿ, ಪಾನಬೀಡ, ಹೋಟೆಲ್‌ಗಳ ಇತ್ಯಾದಿ. ಕೆಲವರು ಅತೀ ಆಸ್ತಿವಂತರು, ಒಕ್ಕಲುತನವೇ ಪ್ರಧಾನ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ಇಂದಿಗೂ ಯಾವುದೇ ಇರಲಿ ನಿಷ್ಠೆಯಿಂದ ಕೆಲಸ ಮಾಡಿ ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾರೆ ಉಜ್ಜಿನಿಯ ಜನರು.

**೪.೨. ಧಾರ್ಮಿಕ ಪದ್ಧತಿ :**

ಭಾರತೀಯ ಪರಂಪರೆಗನುಗುಣವಾದ ದೈವ ಶ್ರದ್ಧೆಗೆ ಉಜ್ಜಿನಿ ಹೊರತಾಗಿಲ್ಲ. ಊರ ತುಂಬ ಇರುವ ಗುಡಿ-ಗೋಪುರ-ಗಂಡಾಚಾರಗಳು ಆಯಾ ದೇವರಿಗೆ ಸಂಬಂಧಿಸಿದಂತೆ ತೋರುವ ಅನೇಕ ಸಂಪ್ರದಾಯ, ಆಚರಣೆಗಳು ಇವರ ಶ್ರದ್ಧ-ಭಕ್ತಿಗಳನ್ನು ದೃಢಪಡಿಸುತ್ತದೆ. ಜನರಿಗೆ ದೇವರನ್ನು ಪ್ರತ್ಯೇಕಿಸಿದ ಧರ್ಮವಿಲ್ಲ. ಇವರ ಧಾರ್ಮಿಕ ಸಂಪ್ರದಾಯ, ಆಚರಣೆಗಳು ದೈವ ನಂಬಿಕೆಯಡಿಯಲ್ಲಿ ಗಾಢವಾಗಿದೆ.

ದೇವರನ್ನು ಕುರಿತಾದ ಕಥೆಗಳು, ಗುಡಿಗಳ ನಿರ್ಮಾಣ, ಪೂಜೆ, ಪುನಸ್ಕಾರ, ಉತ್ಸವ ಮುಂತಾದವುಗಳನ್ನು ನೋಡುತ್ತಾ ಹೋದಂತೆ ದೈವಶಕ್ತಿ ಸಹಜವಾಗಿಯೇ ಗೋಚರಿಸುತ್ತದೆ. ಉಜ್ಜಿನಿ ಧಾರ್ಮಿಕತೆಯ ತವರೂರು. ಉಜ್ಜಿನಿಯಲ್ಲಿ ಸದಾ ಪುರಾಣ-ಪ್ರವಚನಗಳಿಂದ ಕೂಡಿ ಧಾರ್ಮಿಕ ಕೇಂದ್ರವಾಗಿ ಕಂಗೊಳಿಸುತ್ತಿವೆ. ಅಂತಯೇ ಇಲ್ಲಿಯ ಜನ ಧಾರ್ಮಿಕ ಪರಂಪರೆಯುಳ್ಳವರಾಗಿದ್ದಾರೆ.

ಉಜ್ಜಿನಿಯ ಪ್ರಾಚೀನತೆ, ಇತಿಹಾಸ ಮುಂತಾದವುಗಳಿಗೆ ಈಗಿನ ಜಗದ್ಗುರುಗಳು ಉಜ್ಜಿನಿಯ ಮಹಾಸಂಸ್ಥಾನ ಕೋರ್ಟು ಇದ್ದಂತೆ. ಧರ್ಮಕ್ಕೆ ಚ್ಯುತಿ, ಜಾತಿ ಭ್ರಷ್ಟತೆ, ಮಠದ ವ್ಯಾಜ್ಯ, ಪೀಠಗಳ ಸಮಸ್ಯೆ ಬಗೆಹರಿಸಲು ಹಿಂದೂ ಧರ್ಮಕ್ಕೆ ಸುಪ್ರೀಮ್ ತರ ಇದ್ದದ್ದು ಉಜ್ಜಿನಿ ಪಿಠ ಮಾತ್ರ.

ಕೇವಲ ಧರ್ಮ ಪ್ರಚಾರ, ಶಿವದೀಕ್ಷೆಯಲ್ಲಿದೆ ರಾಜಮಹಾರಾಜರ ಕಾಲದಿಂದಲೂ ಧರ್ಮದ ವ್ಯಾಜ್ಯಗಳನ್ನು ಬಗೆಹರಿಸುವ ಶಿಕ್ಷೆ ಕೊಡುವ ಪರಮ ಅಧಿಕಾರವನ್ನು ರಾಜರು, ಪಾಳೆಗಾರರು ಉಜ್ಜಿನಿ ಸದ್ಧರ್ಮ ಮಹಾಸಂಸ್ಥಾನಕ್ಕೆ ನೀಡಿದ್ದರು.

ಬ್ರಿಟೀಷ್ ದೊರೆಗಳು ಯಾವತ್ತೂ ಸದ್ಧರ್ಮ ತೀರ್ಪಿಗೆ ಎದುರಾಗುತ್ತಿರಲಿಲ್ಲ. ಸದ್ಧರ್ಮ ಕೋರ್ಟು ತೀರ್ಪು ಎಂದರೆ ಇಂಗ್ಲೀಷ್ ರಾಜ ಮನೆತನ ನೀಡುತ್ತಿದ್ದ ಆಜ್ಞೆಯಂತೆಯೇ ಶಿರಾಸಾವಹಿಸಿ ಪಾಲಿಸುತ್ತಿದ್ದರು. ಭಾರತೀಯರು ಧರ್ಮದೆಡೆಗೆ ಇದ್ದ ಅತೀವ ಭಕ್ತಿ-ಗೌರವಗಳನ್ನು ಬ್ರಿಟೀಷ್‌ರು ಮನಗಂಡಿದ್ದರು.

೧೮೭೮ರಲ್ಲಿ ಸದ್ಧರ್ಮ ಪೀಠದ ನ್ಯಾಯಾಲಯದ ಆಜ್ಞೆಯನ್ನು ಮೀರಿದ್ದಕ್ಕಾಗಿ ಆಂಧ್ರಪ್ರದೇಶದ ಉರವಕೊಂಡರ ಪ್ರಜೆಗೆ ಗ್ರಾಮದಿಂದ ಬಹಿಷ್ಕಾರ ಹಾಕಿದ್ದ ಸದ್ಧರ್ಮ ಕೋರ್ಟು ತೀರ್ಪಿನ ಆದೇಶದ ಪ್ರತಿಯೊಂದು ಇತ್ತೀಚೆಗೆ ದೊರಕಿದೆ.

ಪರ ಸ್ತ್ರೀಯೊಂದಿಗೆ ಸಂಬಂಧವಿದ್ದವನಿಗೆ ಬಹಿಷ್ಕಾರ, ಜುಲ್ಮಾನೆ ಹಾಕಿದ ಪ್ರಕರಣ ಕೋರ್ಟಿನಲ್ಲಿ ಸುಳ್ಳು ಸಾಕ್ಷಿ ಹೇಳಿ ಶಿಕ್ಷೆಗೆ ಒಳಪಟ್ಟ ಅಪರಾದಿ, ತಾನು ನಿರಪದಾದಿ ಎಂದು ಸಾಬೀತುಪಡಿಸಿದ ಮೇಲೆ ಸುಳ್ಳು ಸಾಕ್ಷಿ ಹೇಳಿದವನಿಗೆ ಶಿಕ್ಷೆ, ದಂಡ ವಿಧಿಸುತ್ತಿದ್ದ ಪ್ರಸಂಗಗಳು ನಡೆದಿವೆ. ಇಂದಿಗೂ ಸರ್ಕಾರಿ ಕೋರ್ಟುಗಳು ಉಜ್ಜನಿ ಸದ್ಧರ್ಮ ಕೋರ್ಟ್‌ನ ತೀರ್ಪನ್ನು ಎತ್ತಿ ಹಿಡಿದ ಪ್ರಸಂಗಗಳಿವೆ. ಈ ಮಾಹಿತಿಯನ್ನು ಮಠದ ಸ್ವಾಮಿಗಳಿಂದ ಮತ್ತು ರುದ್ರಪ್ಪನವರಿಂದ ತಿಳಿಲಾಗಿದೆ.

**೪.೩. ಆರ್ಥಿಕ ಬದುಕು :**

ಅರ್ಥ ವ್ಯವಸ್ಥೆ ಯಾವುದೇ ಸಮಾಜದ ಅರ್ಥ ವ್ಯವಸ್ಥೆಯ ಅಧ್ಯಯನ ಅದು ನಾಗರೀಕತೆಯ ಯಾವ ಹಂತದಲ್ಲಿದೆ ಎಂಬುದರ ಸೂಚನೆಯೂ ಆಗಬಲ್ಲದೆ. ಕಾಲಾನುಗತವಾಗಿ ಮನುಷ್ಯ ಕೈಗೊಂಡ ಅನೇಕ ವಿಧವಾದ ವೃತ್ತಿ–ಉಪವೃತ್ತಿಗಳು ಬದುಕಿಗೆ ಅಗತ್ಯವಾದ ಅರ್ಥ ಸಂಪಾದನೆಯ ಗುರಿಯನ್ನು ಕೇಂದ್ರವಾಗಿ ಉಳ್ಳವಾಗಿದ್ದು ಜನರ ಹಲವು ಮುಖಗಳು ಅರಳಲು ಕಾರಣವಾಗಿವೆ. ನಮ್ಮ ಜನಪರ ಅಧ್ಯಯನಕ್ಕೆ ಮೂಲಾಧಾರವಾದ ವೃತ್ತಿಗಳ ಆರ್ಥಿಕ ಸ್ಥಿತಿಗತಿ, ಅವರ ಪಾರಂಪರಿಕ ಕಲೆ, ಸಂಪ್ರದಾಯ ಮೊದಲಾದ ಜನರ ಸಂಪ್ರದಾಯ ಬದುಕಿನ ಉಳಿವು–ಅಳಿವಿನ ನಿರ್ಧಾರತೆ ಅಂಶವು ಆಗುವುದರಿಂದ ಉಜ್ಜನಿಯ ಅರ್ಥ ವ್ಯವಸ್ಥೆಯನ್ನು ಸೂಕ್ತ ರೀತಿಯಲ್ಲಿ ಗಮನಿಸಬೇಕಾಗುತ್ತದೆ.

ಉಜ್ಜನಿಯಲ್ಲಿ ಹೆಚ್ಚು ಜನ ಕೃಷಿಕರು ಹಾಗೂ ಕೃಷಿ ಕಾರ್ಮಿಕರು ಕೃಷಿಕರಲ್ಲಿ ಸಣ್ಣ ಹಿಡುವಳಿದಾರರು ಹೆಚ್ಚು.

ಅದರಲ್ಲೂ ಮಳೆಯನ್ನು ನಂಬಿ ಬದುಕುವವರ ಸಂಖ್ಯೆಯೇ ಬಹುಪಾಲು. ಮಳೆ ಕರುಣಿಸಿದಾಗ ಇವರ ಬದುಕು ಹಸನಾಗಬಹುದಾದರೂ ಕಳೆದ ಹತ್ತಾರು ವರ್ಷಗಳಿಂದ ಒಂದೊಂದು ವರ್ಷ ಜೀವಿಸುವುದು ದುಸ್ತರವಾಗಿದೆ.

'ವ್ಯವಸಾಯ ನೀನು ಸಾಯ ನಿಮ್ಮಪ್ಪ ಸಾಯ' ಎನ್ನುವ ಗಾದೆ ಮಾತಿನಂತೆ ವ್ಯವಸಾಯಕ್ಕೆ ಹೆಚ್ಚು ಜನಬೇಕು. ಕೆಲವರು ಮನೆಯಲ್ಲಿ ಜನಸಂಖ್ಯೆ ಕಡಿಮೆ, ಕೂಲಿ ಆಳುಗಳು ನಿಗುವುದೂ ಈಗ ಕಡಿಮೆ. ಹೀಗಾಗಿ ಕೆಲಸದ ಹಗುರತೆ ಲಾಭದ ದೃಷ್ಟಿಯಿಂದಾಗಿ ರೈತರು ತಂಬಾಕು, ಹತ್ತಿ ತೋಟಗಳು, ಈರುಳ್ಳಿ ಮುಂತಾದ ವಾಣಿಜ್ಯ ಬೆಳಗಳ ಕಡೆಗೆ ಗಮನ ಹರಿಸಿದ್ದಾರೆ.

ಈಚೆಗೆ ಬಾವಿ, ಬೋರುಗಳಿಂದ ತೆಂಗಿನ ತೋಟ, ರೇಷ್ಮೆ ತೋಟದ ಬೆಳೆಗಳನ್ನು ಬೆಳೆಯಲು ಆರಂಭಿಸಿದ್ದಾರೆ. ಕಬ್ಬಿನ ತೋಟ ಮಾಡಿ ಜನರ ಕಾಟ ತಡೆಯಲಾರದೆ ಅದು ಕೂಡ ತನ್ನ ಆಕರ್ಷಣೆಯನ್ನು ಕಳೆದುಕೊಂಡಿದೆ. ಮಳೆ–ಬೆಳೆಗಳ ಅನಿಶ್ಚಿತತೆಯಿಂದಾಗಿ ರೈತನಿಗೆ ಲಾಭಕ್ಕಿಂತ ಉತ್ಪಾದನೆಯ ವೆಚ್ಚವೇ ಅಧಿಕವಾಗಿದೆ. ಸಾಲ–ಸೂಲಗಳಿಗೆ ಬಲಿಯಾಗಿ ಕಷ್ಟಪಡುತ್ತಿದ್ದಾರೆ. ಹಿಂದೆ ನವಣೆ, ರಾಗಿ, ಕುಸಬಿ, ಎಳ್ಳು, ಸೂರ್ಯಕಾಂತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಈಗ ಅವೆಲ್ಲ ತನ್ನತನವನ್ನೇ ಕಳೆದುಕೊಂಡಿವೆ. ಈಗ ಸಾಮಾನ್ಯ ರೈತನೂ ಪ್ರಯತ್ನಿಸುವ ಮುಖ್ಯ ವಾಣಿಜ್ಯ ಬೆಳೆಯೆಂದರೆ ಟಮೆಟೊ, ಬೆಂಡೆ, ಬದನೆ, ಜವಳೆ, ಮೆಣಸಿನಕಾಯಿ ಉಪ ಜೀವನಕ್ಕೆ ಸಹಾಯಕವಾಗಿವೆ.

ಉಜ್ಜನಿಯಲ್ಲಿ ಅನೇಕ ಯೋಜನೆಗಳನ್ವಯ ಪರಿಶಿಷ್ಟ ಜಾತಿ ವರ್ಗದವರಿಗೆ ಅನೇಕ ಸಹಾಯಗಳು ದೊರೆತರೂ ಅವರು ಬಹುಮಟ್ಟಿಗೆ ಅವನ್ನು ಸರಿಯಾಗಿ ಉಪಯೋಗಿಸದ ಕಾರಣ ಅವರ ಆರ್ಥಿಕ ಸ್ಥಿತಿ ನಿರೀಕ್ಷೆ ಮೀರಿ ಬೆಳವಣಿಗೆಯನ್ನೇ ಕಂಡಿಲ್ಲ.

ಸಣ್ಣ ಕುಟುಂಬದವರಿಗೂ ಇರುವ ಇನ್ನೊಂದು ಆದಾಯ ಮೂಲ ಕುರಿ, ಕೋಳಿ ಸಾಕಾಣಿಕೆಯು ಒಂದು ರೀತಿಯ ಬಡವರ ಆಪದ್ಬಾಂದವ "ಕುರಿ ಇದ್ದರೆ ಮನೆಯಲ್ಲಿ ಹಣವಿದ್ದಂತೆ ಎನ್ನುತ್ತಾರೆ. ನಡೆದಾಡುವ ಹಣವಿದ್ದಂತೆ. ಅಲ್ಲದೇ ಅವುಗಳ ನಿರ್ವಹಣೆಯೂ ಸುಲಭ. ಹೀಗಾಗಿ ಅವುಗಳ ಬಗ್ಗೆ ಹೆಚ್ಚು ಒಲವಿದೆ. ಆದರೂ ಗೋಮಾಳ ಎಂದು ಕರೆಯಿಸಿಕೊಳ್ಳುವ ಕೆರೆಯ ಸುತ್ತಲ ಪ್ರದೇಶ ಹಳ್ಳಿಗಳ ಪ್ರದೇಶ ಈಗಿನ ಮನುಷ್ಯನ ದುರ್ಬುದ್ಧಿಯಿಂದಾಗಿ ಅವುಗಳನ್ನು ಹೊಲಗಳನ್ನಾಗಿ ಮಾಡಿಕೊಂಡಿರುವುರಿಂದ ಕುರಿ–ದನಗಳಿಗೆ ಮೇಯಲು ಸ್ಥಳಾವಕಾಶ ಇಲ್ಲದೆ ತೊಂದರೆಗೆ ಒಳಗಾಗಿದ್ದಾರೆ.

ಕೆಲವರು ಕೋಳಿ ಪಾರಂಗಳನ್ನು ಮಾಡಿ ಅವುಗಳಿಗೆ ತಗಲುವ ರೋಗ–ರುಜಿನಗಳಿಂದ ಸಾಲವನ್ನು ಹೊತ್ತುಕೊಂಡು ಸಾಲಗಾರರಾಗಿದ್ದಾರೆ. ಮನೆ ಮಟ್ಟಿಗೆ ನಾಲ್ಕಾರು ಕೋಳಿಗಳನ್ನು ಸಾಕುತ್ತಿದ್ದರೆ ಬೇಸಿಗೆಯಲ್ಲಿ ಕೂಕ್ಕರು ಬಂದು ಅವುಗಳ ಸಾಯುತ್ತಿವೆ. ಇಷ್ಟರೊಳಗೆ ಇವರು ತಿಂದದ್ದು ಮಾರಿದಷ್ಟೇ ಲಾಭ. ಹೀಗೆ ಸಣ್ಣ ಅತೀ ಸಣ್ಣ ಕುಟುಂಬದವರು ಬದುಕು ಆದಾಯಕ್ಕಾಗಿ ಬಹು ಬಗೆಯಾಗಿ ಕಷ್ಟಪಡಬೇಕಾದ ಸ್ಥಿತಿ ಇದೆ.

ಈ ಊರಿನಲ್ಲಿ ಕೃಷಿಗೆ ಸಂಬಂಧಿಸಿದವರನ್ನು ಬಿಟ್ಟರೆ ಇತರ ಉದ್ಯೋಗಿಗಳಿಗೆ ಸರ್ಕಾರಿ ನೌಕರರು ಗಮನಾರ್ಹರಾಗುತ್ತಾರೆ. ಉಜ್ಜನಿಯಲ್ಲಿ ಈಗಲೂ ಇರುವವರೂ ಉದ್ಯೋಗ ಕುಟುಂಬ ಮೊದಲಾದ ಕಾರಣಗಳಿಗಾಗಿ ಬೇರೆ ಕಡೆ ಇರುವವರು ಇವರನ್ನೆಲ್ಲ ಗಮನಿಸಿ ಹೇಳುವುದಾದರೆ

ಇವರಲ್ಲಿ ಆಫೀಸ್ ಜವಾನರಿಂದ ವಿಶ್ವವಿದ್ಯಾಲಯದ ಪ್ರೊಫೆಸರ್‌ವರೆಗೆ, ಡಾಕ್ಟರ್‌ಗಳು, ಖಾರ್ಕಾನೆ ನೌಕರ, ಅಧಿಕಾರಿ ಈ ಮೊದಲಾದ ಹುದ್ದೆಗಳಲ್ಲಿದ್ದಾರೆ. ಇದರಲ್ಲಿ ಶಿಕ್ಷಕರದೇ ಮೇಲುಗೈ. ಇವರಲ್ಲದೆ ಖಾಸಗಿ ವಲಯಗಳಲ್ಲಿ ದುಡಿಯುತ್ತಿರುವವರು ಡ್ರೈವರ್, ಕಂಡಕ್ಟರ್, ಮನೆಗೆಲಸದವರು ಮುಂತಾದ ವಿವಿಧ ಕೆಲಸಗಳಲ್ಲಿ ಹಂಚಿ ಹೋಗಿದ್ದಾರೆ. ಬಿಲ್ಡಿಂಗ್ ಕಂಟ್ರಾಕ್ಟರ್, ಶಾಖಾ ಮ್ಯಾನೇಜ್‌ಮೆಂಟ್, ಚಿಲ್ಲರೆ ಅಂಗಡಿ, ಕ್ಯಾಸೆಟ್ ಅಂಗಡಿ, ಕಿರಾಣಿ ಅಂಗಡಿ, ಹಣ್ಣು-ತರಕಾರಿ, ತೆಂಗಿಕಾಯಿ ಅಂಗಡಿ ಇತ್ಯಾದಿ ಸ್ವಯಂ ಉದ್ಯೋಗಗಳಲ್ಲಿ ಇದ್ದಾರೆ. ಇವರಲ್ಲಿ ಬಹಳ ಜನ ಊರ ಹೊರಗೆ ಇರುವುದರಿಂದ ಅವರಿಂದ ತನ್ನ ಊರ ಮನೆಯವರಿಗೆ ಆರ್ಥಿಕ ಸಹಾಯ ದೊರೆಯುತ್ತದೆ. ಕೆಲವರು ತಮ್ಮ ಮನೆಯ ಖರ್ಚು-ವೆಚ್ಚುಗಳನ್ನು ನೋಡಿಕೊಳ್ಳುವುದರಿಂದ ಅವರ ಕುಟುಂಬಗಳು ಸುಧಾರಿಸಿವೆ. ಇನ್ನು ಕೆಲವರು ಬಡ್ಡಿ ವ್ಯವಹಾರ, ದಲ್ಲಾಳಿ, ವ್ಯಾಪರ ಇತ್ಯಾದಿ ಹವ್ಯಾಸವಾಗಿ ಜೀವನ ನಡೆಸುವವರು ಇದ್ದಾರೆ. ಕೆಲವರು ಮರ ಕೊರೆದು ಮನೆ ಮುಟ್ಟುಗಳನ್ನು, ಕೃಷಿ ಉಪಕರಣಗಳನ್ನು ಮಾಡುವ ಮತ್ತು ಯಂತ್ರಗಳನ್ನು ಹಾಕಿಕೊಂಡಿದ್ದಾರೆ.

ಕೋರಿಗೆ ಮತ್ತು ಗುತ್ತಿಗೆ ಇವು ಜಮೀನ್ದಾರಿ ಪದ್ಧತಿಯ ನಡವಳಿಕೆಗಳು ಕೆಲವರಿಗೆ ಹೆಚ್ಚು ಭೂಮಿ ಇದ್ದರೂ ಅವರಿಗೆ ಸಾಕಷ್ಟು ದುಡಿಯುವ ಶಕ್ತಿ ಇರುವುದಿಲ್ಲ. ಕೆಲವರು ದುಡಿಯುವ ಸಾಮರ್ಥ್ಯ ಹೊಂದಿದ್ದರೂ ದುಡಿಯಲು ಜಮೀನ ಹೊಂದಿರುವುದಿಲ್ಲ. ಅಂಥವರ ನಡುವೆ ಈ ಒಪ್ಪಂದಗಳು ನಡೆಯುತ್ತವೆ.

ಜಮೀನ್ದಾರನಿಂದ ಪಡೆದ ಜಮೀನನಲ್ಲಿ ಬೇಸಾಯ ಮಾಡಿ ಬಂದ ಫಸಲಿನಲ್ಲಿ ಅದಕ್ಕೆ ಆ ದ ಬೀಜ ಗೊಬ್ಬರದ ಖರ್ಚು ತೆಗೆದು ಉಳಿದದ್ದರಲ್ಲಿ ಇಬ್ಬರೂ ಸಮಭಾಗ ಮಾಡಿಕೊಳ್ಳುವುದನ್ನು ಕೋರಿಗೆ ಕೊಡುವುದು ಎನ್ನುತ್ತಾರೆ. ಇದಕ್ಕೆ ಬದಲು ತಾನು ಒಡೆದ ಜಮೀನಿನಲ್ಲಿ ಎನನ್ನು, ಎಷ್ಟು ಬೇಕಾದರೂ ಬೆಳೆದುಕೊಂಡರು ಮೊದಲೇ ನಿಗದಿಯಾದಷ್ಟು ಹಣವನ್ನು, ಕಾಳನ್ನು ಮಾಲಿಕನಿಗೆ ಕೊಡುವುದು ಗುತ್ತಿಗೆ ಎನಿಸುತ್ತದೆ. ನೀರಾವರಿಯಲ್ಲಿ ಎಕರೆಗೆ ೨೦೦೦ ಅಥವಾ ಇಂತಿಷ್ಟು ಕಾಳನ್ನು ಕೊಡಬೇಕಾಗುತ್ತದೆ. ಕೋರಿಗೆಯಲ್ಲಿ ಲಾಭ-ನಷ್ಟ ಇಬ್ಬರಿಗೂ ಸಮನಾದರೆ ಗುತ್ತಿಗೆಯಲ್ಲಿ ಲಾಭ-ನಷ್ಟ ಎನೇ ಆದರೂ ಶ್ರಮಿಕನದೇ ಆಗಿರುತ್ತದೆ.

ಹಿಂದೆ ಹಣಕ್ಕೆ ಹೆಚ್ಚು ಬೆಲೆ ಇದ್ದಾಗ ಸ್ತ್ರೀಯರಿಗೆ ಹಣ ಸಿಕ್ಕುವುದು ದುಸ್ತರವಾಗಿದ್ದು, ತಮ್ಮ ಕೆಲವು ವೈಯಕ್ತಿಕ ಬೇಡಿಕೆಗಳಿಗಾಗಿ ಅತ್ತೆ, ಮಾವ, ಗಂಡು ಮಕ್ಕಳು ಅಂಗಡಿಗಳಿಗೆ ರಾಗಿ-ಭತ್ತ ಇತ್ಯಾದಿ ಮಾಡುತ್ತಿದ್ದುದುಂಟು. ಈಚೆಗೆ ಅವೆಲ್ಲಾ ಕಡಿಮೆಯಾಗಿವೆ. ಸರ್ಕಾರ ಈಚೆಗೆ ವಿಧವೆಯರಿಗೆ, ವೃದ್ಧರಿಗೆ ಪಿಂಚಣಿ ಹಣದಿಂದಾಗಿ ಕೈ ಕಸಬುಗಳಿಂದ ಸ್ವಲ್ಪ ಹಣ ಕಾಣುವಂಥಾಗಿದೆ.

೪.೪. ಶೈಕ್ಷಣಿಕ ಸ್ಥಿತಿ :

ಕರ್ನಾಟಕದಲ್ಲಿ ಮಠಗಳು ಶಿಕ್ಷಣ ರಂಗಕ್ಕೆ ನೀಡಿದ ಕೊಡುಗೆಗಳು ಮಹತ್ವದ್ದಾಗಿದೆ. ಉಜ್ಜಿನಿ ಪೀಠವು ಸಹಿತ ಶಾಲಾ–ಕಾಲೇಜುಗಳನ್ನು ನಡೆಸುವುದರೊಂದಿಗೆ ಶೈಕ್ಷಣಿಕ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಜೊತೆಗೆ ಉಜ್ಜಿನಿಯನ್ನು ಸುತ್ತಲಿನ ಊರುಗಳಿಗೆ ಶೈಕ್ಷಣಿಕ ಕೇಂದ್ರವಾಗಿದೆ. ಇದಕ್ಕೆ ಕಾರಣರಾದವರು ಚಿಂತಕರು ಆಗಿದ್ದ ಲಿಂಗೈಕ್ಯ ಪೂಜ್ಯ ಶ್ರೀ ಸಿದ್ಧಲಿಂಗ ಜಗದ್ಗುರುಗಳು. ಜನರಲ್ಲಿ ಧರ್ಮ ಜಾಗೃತಿಯನ್ನು ಬೆಳೆಸುವುದರ ಜೊತೆಗೆ ಶೈಕ್ಷಣಿಕ ಜಾಗೃತಿಯನ್ನು ಉಜ್ಜಿನಿಯಲ್ಲಿ ಬೆಳೆಸುವುದಕ್ಕೋಸ್ಕರ ಪೀಠದಿಂದಲೇ ಜ್ಞಾನಗುರು ವಿದ್ಯಾಪೀಠವೆಂಬ ಶೈಕ್ಷಣಿಕ ಸಂಸ್ಥೆಯನ್ನು ಸ್ಥಾಪಿಸಿ ಈ ಸಂಸ್ಥೆಯ ಮೂಲಕ ನಾಡಿನ ಬಡಮಕ್ಕಳಿಗೆ ಸಂಸ್ಕೃತ, ಕನ್ನಡ, ಇಂಗ್ಲೀಷ್ ಭಾಷೆಗಳಲ್ಲಿ ಶಿಕ್ಷಣವನ್ನು ನೀಡುವುದರ ಮೂಲಕ ಶೈಕ್ಷಣಿಕ ಪ್ರಚಾರ ಕಾರ್ಯ ಕೈಗೊಳ್ಳಬೇಕು ಎನ್ನುವ ಮನೋಭಿಲಾಷೆಯನ್ನು ಶ್ರೀ ಸಿದ್ಧೇಶ್ವರ ರಾಜದೇಶಿ ಕೇಂದ್ರ ಶಿವಾಚಾರ್ಯ ಸ್ವಾಮಿಗಳು ೧೯೪೭ರಲ್ಲಿ ಶ್ರೀ ಜಗದ್ಗುರು ಉಜ್ಜಿನಿಯ ಸದ್ಧರ್ಮ ಸಿಂಹಾಸನ ಜ್ಞಾನಗುರು ವಿದ್ಯಾಪೀಠವನ್ನು ಸ್ಥಾಪಿಸಿ ತಮ್ಮ ಗುರುಗಳು ಉಜ್ಜಿನಿಯ ಜನತೆಯ ಆಸೆಯನ್ನು ಈಡೇರಿಸಿದರು. ಜ್ಞಾನಗುರು ವಿದ್ಯಾಪೀಠಕ್ಕೆ ತನ್ನದೇ ಆದಂತಹ ನೆಲೆಯನ್ನು ತೋರಿಸಿದ ನಂತರ ಪ್ರಾಥಮಿಕ ಹಂತವಾಗಿ ಉಜ್ಜಿನಿಯಲ್ಲಿ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸುವುದರೊಂದಿಗೆ ವಿದ್ಯಾಪೀಠದ ಶೈಕ್ಷಣಿಕ ಕಾರ್ಯ ಪ್ರಾರಂಭವಾಯಿತು. ಸಂಸ್ಕೃತ ಪಾಠಶಾಲೆಯಿಂದ ಪ್ರಾರಂಭವಾದ ಕಾರ್ಯವನ್ನು ಸ್ವಾಮಿಗಳು ಸುತ್ತಮುತ್ತಲಿನ ಬಡ ಜನರ ಅನುಕೂಲಕ್ಕೋಸ್ಕರ ೧೯೬೩ರಲ್ಲಿ ಮಠದಲ್ಲಿಯೇ ಪ್ರೌಢಶಾಲೆಯನ್ನು ಪ್ರಾರಂಭಿಸಿದರು. ಜಾತಿ–ಬೇಧ, ವರ್ಗ ಬೇಧವೆನ್ನದೇ ಎಲ್ಲ ಮಕ್ಕಳು ಸಂಸ್ಕೃತವನ್ನು ಕಲಿಯುವಂತಾಯಿತು. ನಂತರ ಸರ್ಕಾರಿ ಪ್ರಾಥಮಿಕ ಶಾಲೆಗಳು ಆರಂಭವಾದವು. ಇದರಿಂದ ಉಜ್ಜಿನಿಯ ಬಡ ಜನರಿಗೆ ಇನ್ನು ಅನುಕೂಲವಾಯಿತು.

ಹಿಂದೆ ಜಮೀನ್ದಾರರ ಮಕ್ಕಳು ಬಂಡವಾಳಶಾಹಿಗಳು ಮಾತ್ರ ಶಿಕ್ಷಣವನ್ನು ಕಲಿಯುತ್ತಿದ್ದರು. ಬಡ ಜನರೂ, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರೂ ಶಿಕ್ಷಣವನ್ನು ಕಲಿಯುವುದು ದುಸ್ತರವಾಗಿತ್ತು. ಆದರೆ ಉಜ್ಜಿನಿಯಲ್ಲಿ ಈಗ ಆ ರೀತಿಯ ಹಿಂದಿನ ಪದ್ಧತಿಗಳು ಉಳಿದಿಲ್ಲ. ಊರಿನ ಎಲ್ಲಾ ವರ್ಗದವರು ಉನ್ನತ ಶಿಕ್ಷಣ ಪಡೆಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಅದಕ್ಕೆ ಕಾರಣ ಸುತ್ತಮುತ್ತಲಿನ ಹಳ್ಳಿಗಳ ಸರ್ಕಾರಿ ನೌಕರರ ಸಂಖ್ಯೆ ಉಜ್ಜಿನಿಯ ನೌಕರರ ಸಂಖ್ಯೆಯನ್ನು ಗಮನಿಸಿದರೆ ಉಜ್ಜಿನಿಯು ಪ್ರಥಮ ಸ್ಥಾನದಲ್ಲಿ ನಿಲ್ಲುತ್ತದೆ. ಹರಿಜನ, ಕುರುಬ, ನೇಕಾರರು, ನಾಯಕರು, ಚಲವಾದಿಗಳು ಎಲ್ಲ ಹಿಂದುಳಿದ ವರ್ಗದವರು ಹಲವಾರು ಇಲಾಖೆಗಳಲ್ಲಿ

ಹುದ್ದೇಯನ್ನು ಪಡೆದುಕೊಂಡಿದ್ದಾರೆ ಇದಕ್ಕೆ ಕಾರಣ ಇಲ್ಲಿರುವ ಶಾಲಾ-ಕಾಲೇಜುಗಳು ಹಾಗೂ ವಸತಿ ನಿಲಯಗಳೇ ಸಾಕ್ಷಿಯಾಗಿವೆ.

**ಶಾಲೆಗಳು :**

೧. ಅಂಗನವಾಡಿಗಳು ಎಡರು-ಮೂರು

೨. ಸರಕಾರಿ ಹಿರಿಯ ಮಾದರಿ ಶಾಲೆ

೩. ಸರ್ಕಾರಿ ಹಿರಿಯ ಬಾಲಕಿಯರ ಶಾಲೆ

೪. ಸರ್ಕಾರಿ ಹಿರಿಯ ಮರುಳಸಿದ್ಧೇಶ್ವರ ಶಾಲೆ

೫. ಸರ್ಕಾರಿ ಉರ್ದು ಶಾಲೆ

೬. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ (ಕ್ಯಾಂಪಿನಲ್ಲಿ)

೭. ಉಜ್ಜಿನಿ ಜಗದ್ಗುರು ಸಂಯುಕ್ತ ಪದವಿಪೂರ್ವ ಕಾಲೇಜು

೮. ಚೆನ್ನ ಬಸವೇಶ್ವರ ಪ್ರಾಥಮಿಕ ಶಾಲೆ

ವಸತಿ ನಿಲಯಗಳು :

೧. ಅನಾಥ ಮಕ್ಕಳ ವಸತಿ ನಿಲಯ

೨. ಪರಿಶಿಷ್ಟ ಜಾತಿ-ಪಂಗಡದ ವಸತಿ ನಿಲಯ

೩. ಅಲ್ಪಸಂಖ್ಯಾತರ ವಸತಿ ವಿದ್ಯಾರ್ಥಿ ನಿಲಯ

೪. ಬಿ.ಸಿ.ಯಂ. ವಿದ್ಯಾರ್ಥಿ ನಿಲಯ

ಈ ರೀತಿಯಾಗಿ ಬೆಳೆದ ಉಜ್ಜಿನಿಯ ಶೈಕ್ಷಣಿಕ ಸ್ಥಿತಿ ತುಂಬಾ ಉತ್ತಮವಾಗಿದೆ ಮತ್ತು ಪ್ರಗತಿಪರವಾಗಿದೆ.

## ಅಡಿ ಟಿಪ್ಪಣಿ

೧. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಸಂಶೋಧಿತ ಲೇಖನಗಳು

೨. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ

೩. ಈ ಎಲ್ಲಾ ಮಹಿತಿಯನ್ನು ಉಜ್ಜಿನಿ ಜನರಿಂದ ತಿಳಿದುಕೊಂಡಿದೆ.

೪. ಶಾಲಾ-ಕಾಲೇಜು, ವಸತಿ ನಿಲಯಗಳ ಮಾಹಿತಿ ಉಜ್ಜಿನಿ ಗ್ರಾಮ ಪಂಚಾಯತಿಯಿಂದ ಸಂಗ್ರಹಿಸಲಾಗಿದೆ.

## ಅಧ್ಯಾಯ – ಐದು

# ಉಜ್ಜಿನಿ ಗ್ರಾಮದ ಸಂಸ್ಕೃತಿ

**೫.೧. ರೂಢಿ ಪದ್ಧತಿಗಳು :**

ಹಬ್ಬವೆಂಬ ಪದವು ಸಂಸ್ಕೃತದ 'ಪರ್ವನ್' ಶಬ್ದದ ರೂಪ. ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಸೂರ್ಯ–ಚಂದ್ರ ದಿಕ್ಕು ಬದಲಾಗುವುದೇ ಪರ್ವ. ಅದನ್ನೇ ನಮ್ಮ ಪೂರ್ವಜರು ಶುಕ್ಲಪಕ್ಷ ಅಥವಾ ಅಮವಾಸ್ಯೆ, ಹುಣ್ಣಿಮೆಗಳೆಂದು ಹೆಸರಿಸಬಹುದು. ಮಾನವ ತನ್ನ ಬಯಕೆ ಇಲ್ಲವೇ ಸಂಕಲ್ಪ ವೃತ್ತ ಆ ಇಚ್ಚೆಯ ಈಡೇರಿಕೆಗಾಗಿ ಒಂದು ಸಿಮೀತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ, ಸಂಪ್ರದಾಯ, ಆಚರಣೆ, ಉತ್ಸವಗಳೇ ಹಬ್ಬಗಳಾಗಿ ಬಂದಿವೆ. ಮಹಾಕವಿ ಕಾಳಿದಾಸ ತನ್ನ ವಿಕ್ರಮೋರ್ವ ಶೀಯಾ ಕೃತಿಯಲ್ಲಿ 'ಉತ್ಸವ ಪ್ರಮಾಣ ಮನುಷ್ಯ' ಎಂದು ಹೇಳಿದ್ದನ್ನು ನೋಡಿದರೆ ಮಾನವ ಐಹಿಕ ಸುಖ–ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ ಹಬ್ಬ ಆಚರಣೆಯಲ್ಲಿ ಬಂದಂತೆ ತೋರುತ್ತದೆ. ಸೃಷ್ಠಿಕರ್ತನಾದ ಶಿವನ ಪ್ರಪಂಚದ ಸ್ಥಿತಗೆ ಗ್ಲಾನಿಯುಂಟಾದಾಗ ನಾನಾ ರೂಪಗಳಿಂದ ಅವರಿಸಿ ಬಂದ ಸಮಯದಲ್ಲಿ ಅವನ ರೂಪವನ್ನು ಸ್ಮರಿಸಿ ಅವನಿಗೆ ಎಲ್ಲರೂ ಯಥಾಶಕ್ತಿ ಕೃತಜ್ಞತೆ ಅರ್ಪಿಸುವರು.

ಈ ತೆರನಾದ ಸಮಾರಂಭದ ದಿನಗಳನ್ನು ಹಬ್ಬ–ಹರಿದಿನಗಳೆಂದು ಕರೆಯುತ್ತಾ ಬಂದಿದ್ದಾರೆ. ಮಾನವ ತನ್ನ ನಿತ್ಯ ಲೌಕಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ ಆಚರಿಸುತ್ತಾ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಅದನ್ನು ಬಡವ–ಬಲ್ಲಿದರೆಲ್ಲರೂ ಹರುಷದಿಂದ ಆಚರಿಸುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಇತರ ಕಡೆಗಳಲ್ಲೆಲ್ಲಾ ಹಿಂದೂ, ಮುಸಲ್ಮಾನರು ಆಚರಿಸುವ ಹಬ್ಬಗಳನ್ನು ಉಜ್ಜಿನಿಯಲ್ಲಿಯೂ ಆಚರಿಸುತ್ತಾರೆ. ಆದರೆ

ಆಚರಣಾ ರೀತಿಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಕಂಡುಬರಬಹುದು. ಕಡ್ಡಾಯವಾಗಿ ತುಂಬ ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾ ಬಂದಿರುವ ಹಬ್ಬಗಳೆಂದರೆ ಯುಗಾದಿ, ಕಾರಹುಣ್ಣಿಮೆ, ನಾಗರ ಪಂಚಮಿ, ದಸರಾ, ದೀಪಾವಳಿ, ಎಳ್ಳಮಾವಾಸೆ, ಕಾರ್ತೀಕೋತ್ಸವ, ಭರತ ಹುಣ್ಣಿಮೆ, ಪರವು, ಜೋಕಪ್ಪನ ಹಬ್ಬ, ಮೊಹರಂ, ಹೋಳಿ, ಮರುಳಸಿದ್ಧೇಶ್ವರನ ರಥೋತ್ಸವ, ಕಾರ್ತಿಕ ಶಿಖರಕ್ಕೆ ಎಣ್ಣೆ ಎರೆಯುವುದು ಇತ್ಯಾದಿ ಸಾವಿರಾರು ಭಕ್ತಾಧಿಗಳು ಈ ಧಾರ್ಮಿಕ ಎಣ್ಣೆ ಎರೆಯುವ ಸಂದರ್ಭದಲ್ಲಿ ಸೇರಿರುತ್ತಾರೆ. ಮುದಕರು, ತರುಣರು ಸೇರಿ ಶಿಖರಕ್ಕೆ ಎಣ್ಣೆಯನ್ನು ಎರೆಯುತ್ತಾರೆ. ಒಂದು ವಿಶೇಷವೆಂದರೆ ಈ ಕಾರ್ಯ ಆ ದಿನ ೩.೫೦ರಿಂದ ೪.೦೦ ಗಂಟೆಯ ಸಮಯದಲ್ಲಿ ಜರುಗುತ್ತದೆ. ಅಂದಿನ ಸಿನ ವರುಣನ ಕೃಪೆಯಾಗುವುದಂತೂ ನಿಜ, ಸತ್ಯ ನಾವೆಲ್ಲರೂ ನೋಡಿರುವ ಪ್ರಕಾರ ಮಳೆಯಂತೂ ಬಂದೇ ಬರುತ್ತದೆ ಎಂದು ಜನ ಹೇಳುತ್ತಾರೆ. ಅಂದು ಜರಮಲಿಯ ನಾಯಕರು ಕ್ಷಾತ್ರಮಪ್ತಿಯಾಗಿದ್ದರೂ ಬೇಡರು ಆಗಿದ್ದರು. ಮದ್ಯ-ಮಾಂಸಾದಿಗಳನ್ನು ಸೇವಿಸುವುದಿಲ್ಲ. ಇಂದಿಗೂ ಈ ಪಾಳೆಗಾರರು ಸ್ನಾನ, ಪೂಜಾಧಿಗಳೆಲ್ಲದೆ ಊಟೋಪಚಾರಗಳನ್ನು ಮಾಡುವುದಿಲ್ಲ. ಗುರುಗಳ ಆಶೀರ್ವಾದ ಪತ್ರ ತಲುಪಿದ ನಂತರವೇ ಇವರಿಗೆ ಸಮಾಧಾನ.

**೫.೨. ಹಬ್ಬ-ಹರಿದಿನಗಳು :**

**ಯುಗಾದಿ :**

'ಯುಗಾದಿ' ಎಂಬ ಸಂಸ್ಕೃತ ಪದದ ತದ್ಭವ ರೂಪವೇ 'ಉಗಾದಿ'. ಸಂಸ್ಕೃತದಲ್ಲಿ 'ಯುಗ' ಎಂದರೆ ವರ್ಷ. 'ಆದಿ' ಎಂದರೆ ಆರಂಭ ಎಂದರ್ಥ. ಆದ್ದರಿಂದ ಯುಗ+ಆದಿ= ಯುಗಾದಿ 'ಯುಗಾದಿ' ಎಂದರೆ ವರ್ಷಾರಂಭ ಅದು ಎಲ್ಲದಕ್ಕೂ ಹೊಸದಿನ. ನಿಸರ್ಗದಲ್ಲಯೂ ಗಿಡ, ಮರಗಳು ಚಿಗಿತು ಹೊಸ ಜೀವಕಳೆ ಬಂದಂತಾಗುತ್ತದೆ. ಹೀಗಾಗಿ ನಮ್ಮ ಹಿಂದೂಗಳು ಕೂಡ ಯುಗಾದಿಯನ್ನು 'ಹೊಸವರ್ಷ'ವೆಂದು ಭಾವಿಸಿ ಅದನೊಂದು ಹಬ್ಬವನ್ನಾಗಿ ಆಚರಿಸುತ್ತಾರೆ.

'ಉಗಾದಿ ಉದ್ರಿ' ಎಂಬುವುದು ಜನಪದರಲ್ಲಿ ಬಹಳ ಪ್ರಚಲಿತವಿರುವ ಮಾತು. ಮತ್ತೊಂದು "ಉಗಾದಿ ತಂಕ ಬರ‍್ಕಾ ಉಗಾದಿ ಆದಮ್ಯಾಲ ಅರ‍್ಕ" ಉಗಾದಿ ಬಂತೆಂದರೆ 'ಕಿರಾಣಿ ಅಂಗಡಿ', ಬಟ್ಟೆ ಅಂಗಡಿ, ಹೊಟೇಲ್ ಬಾಕಿ ಮೊದಲಾದವುಗಳ ಹಳೆ ಬಾಕಿ ಕೊಡುವುದು, ಹೊಸದಾಗಿ ಸಾಲ ಕೊಡುವುದು, ಪಡೆಯುವುದು, ಹೊಸ ಅಂಗಡಿಯನ್ನು ತೆರೆಯುವುದು, ಮನೆ ಕಟ್ಟಿಸುವುದು, ಬಾಗಿಲನ್ನು ಇಡುವುದು, ಗುಡಿಯ ಜೀರ್ಣೋದ್ಧಾರ ಮಾಡುವುದು ಹಲವಾರು ಶುಭ ಕಾರ್ಯಗಳನ್ನು ಈ ಯುಗಾದಿ ಹಬ್ಬದ ಸಂದರ್ಭದಲ್ಲಿ ಜರಗುತ್ತವೆ.

ಜನಪದರಿಗೆ ಬಿಡುವಿನ ದಿನಗಳೆಂದರೇ ಹೆಚ್ಚು ಯುಗಾದಿ ಹಬ್ಬದ ಸಂದರ್ಭದ ದಿನಗಳೆನ್ನಬೇಕು. ಏಕೆಂದರೆ ಹಿಂಗಾರು ಬೆಳೆಗಳ ಸುಗ್ಗಿಯಲ್ಲಿ ಮುಗಿದು ನಿಶ್ಚಿಂತರಾಗಿ ಯುಗಾದಿ ದಿಢೀರನೆ ಬಂದು ಬಿಡುತ್ತದೆ. ಹಬ್ಬದ ಮುನ್ನಾ ದಿನ ಮನೆ-ಮಾರುಗಳಿಗೆ ಸುಣ್ಣ-ಬಣ್ಣ ಬಳಿಯುವುದು, ಗೋಡೆ ನೆಲಕ್ಕೆ ಸಾರಿಸುವುದು, ಮನೆಯ ಹಾಸಿಗೆ-ಹೊದಿಕೆಗಳನ್ನು ನೀರಿನಲ್ಲಿ ಹಾಕಿ ತೊಳೆಯುವುದು, ಬಾಗಿಲ ಕಿಟಕಿ, ಎತ್ತಿನ ಗಾಡಿಗಳಿಗೆ ಬಣ್ಣ ಹಚ್ಚುವುದು, ಮನೆ ಬಾಗಿಲಿಗೆ ಅಗಸಿ ಎಣ್ಣೆ ಹಚ್ಚಿ ತಳಿರು ತೋರಣ ಕಟ್ಟಿ, ಶೃಂಗಾರ ಮಾಡುವುದು, ತಮ್ಮ ಸಾಕು ಪ್ರಾಣಿಗಳಾದ ಎತ್ತು, ಆಕಳು, ಎಮ್ಮೆಗಳ ಮೈ ತೊಳೆಯುವುದು ಇವೆಲ್ಲ ಅಮವಾಸೆಯ ದಿನ ಬಹುಪಾಲು ತಮ್ಮ ಮನೆಯ, ಕೇರಿಯ, ಊರ ಗ್ರಾಮ ದೇವತೆಗಳಗೆ ದೀಪ ಹಚ್ಚಿ, ಕಾಯಿ ಒಡೆದು, ಜೋಳದ ಬಾನ ಹಿಡಿಯುತ್ತಾರೆ. ಇದು ಯುಗಾದಿಯ ಮೊದಲ ಘಟ್ಟ, ಪಾಡ್ಯದ ದಿನ ಉಗಾದಿ ಆಚರಣೆಯ ಎರಡನೇ ಹಂತ ಅಂದು ನಸುಕಿನಲ್ಲಿಯೇ ಎದ್ದು ತಲೆ-ಮೈ, ಕೈತುಂಬ ಎಣ್ಣೆ ಹಚ್ಚಿಕೊಂಡು ಬಿಸಿ ನೀರಿನಲ್ಲಿ ಬೇವಿನ ಎಲೆ ಹಾಕಿಕೊಂಡು ಸ್ನಾನ ಮಾಡುತ್ತಾರೆ. ನಂತರ ಸೊಂಟಕ್ಕೆ ಕಟ್ಟಿಕೊಂಡಿದ್ದ ಹಳೆ ಉಡುದಾರವನ್ನು ಕಳಚಿ ಹೊಸದಾಗಿ ಕಟ್ಟಿಕೊಳ್ಳುತ್ತಾರೆ. ನಂತರ ಕಷ್ಟಪಟ್ಟು ಹೊಲಿಸಿಕೊಂಡ ಹೊಸ ಬಟ್ಟೆಗಳನ್ನು ಧರಿಸಿ ದೇವರ-ದಿಂಡಿರುಗಳನ್ನು ಪೂಜಿಸಿ ಬೇವು-ಬೆಲ್ಲ ಹಂಚಿ ತಿನ್ನುತ್ತಾರೆ. ಬೇವು-ಬೆಲ್ಲವನ್ನು ಅವರವರ ಶಕ್ತ್ಯಾನುಸಾರ ತರಿಸುತ್ತಾರೆ. ಆದರೆ ತುಂಬಾ ಬಡತನದಲ್ಲಿರುವವರು ಬೇವಿನ ಹೂ, ಬೆಲ್ಲ, ಹುಣಸಿ ಹುಳಿಯನ್ನು ಬಿಟ್ಟರೆ ಮತ್ತೆನನ್ನು ಬೆರೆಸುವುದಿಲ್ಲ. ಆದರೆ ಸ್ವಲ್ಪ ಅನುಕೂಲಸ್ಥರು, ಸಿರಿವಂತರು ಬಟಾಣಿ (ಅಚ್ಚಕಡ್ಲೆ) ಹಿಟ್ಟಿಗೆ ಬೀಸಿದ ಸಕ್ಕರೆಯನ್ನು ಅಥವಾ ಬೆಲ್ಲವನ್ನು ಬೇವಿನ ಹೂವಿಗೆ ಕೂಡಿಸಿ ಪಾಕ ಮಾಡುತ್ತಾರೆ. ಕೆಲವರು ಅದರಲ್ಲಿ ಕೊಬ್ರಿ, ಕಲ್ಲು ಸಕ್ಕರೆ ಮತ್ತು ಕಸಕಸಿಯನ್ನು ಬೆರಸುವುದುಂಟು. ಇದನ್ನೆಲ್ಲಾ ಬೋಗೋಣಿ ಅಥವಾ ಕುಂಬಾರರ ಮನೆಯಿಂದ ತಂದ ಹೊಸ ಗಡಿಗೆಯಲ್ಲಿ ಹಾಕಿಟ್ಟು ಮನೆಯವರೆಲ್ಲ ಒಂದೊಂದು ಲೋಟ ಕುಡಿಯುತ್ತಾರೆ. ಇದು 'ನೀರ್‌ಬೇವು' ಎನ್ನುತ್ತಾರೆ. ಮನೆಗೆ ಬಂದವರಿಗೂ ಕೊಡುತ್ತಾರೆ. ಇದಕ್ಕೆ 'ಬೇವು-ಬೆಲ್ಲ' ಎಂದೂ ಕೂಡ ಕರೆಯುತ್ತಾರೆ. ಸ್ನಾನ, ಬೇವು, ಪಾನ ಮುಡಿಯುವಷ್ಟರಲ್ಲಿ ಹೊತ್ತು ನೆತ್ತಿಗೇರುತ್ತಾ, ನೆಲ ಕಾದು ಚುರುಗುಟ್ಟುವ ಬಿಸಿಲು ಪ್ರಾರಂಭವಾಗಿರುತ್ತದೆ. ಅದು ಎಳ್ಳು ಅಮವಾಸೆಗೆ ಎಳ್ಳು ಕಾಳಷ್ಟು ಅವರಾತ್ರಿಗೆ ಅವರಿಕಾಳಷ್ಟು, ಶಿವರಾತ್ರಿಗೆ ಶಿವ ಶಿವ, ಉಗಾದಿಗೆ ಉಗಿಉಗಿ ಹಾಯಿವಂತಿರುತ್ತದೆ. ಬಿಸಿಲು ಮನೆಯಲ್ಲಿ ಹೆಣ್ಣಮಕ್ಕಳು ಮೊದಲು ಬೇಯಿಸಲು ಹಾಕಿದ ಬೇಳೆಯನ್ನೇ ಬಸಿದು, ಕಟ್ಟಿನ ಸಾರು, ಅನ್ನ ಮಾಡಿ, ಬೇಳೆ ರುಬ್ಬಿ ಹೋಳಿಗೆ ಮೊದಲಾದ ತಿಂಡಿ-ತಿನಿಸುಗಳನ್ನು ತಯಾರಿಸುತ್ತಾರೆ. ಮತ್ತು ಶಿವರಾತ್ರಿಗೂ ಹಿಂದೆಯೇ ಮಾಡಿಟ್ಟ ಶ್ಯಾವಿಗೆಯ ಊಟ ಎಲ್ಲರ ಮನೆಯಲ್ಲಿ ಸರ್ವ ಸಾಧರಣವಾಗಿ ಇದ್ದೇ ಇರುತ್ತದೆ.

**ಕಾರಹುಣ್ಣಿಮೆ :**

ಜನರು ಆಚರಿಸುವ ಪುರುಷ ಪ್ರಧಾನವಾದ ಹಬ್ಬಗಳಲ್ಲಿ ಕಾರಹುಣ್ಣಿಮೆ ಒಂದಾಗಿದೆ. ಕಾರಹುಣ್ಣಿಮೆಯ ಆಡು ಮಾತಿನ ರೂಪವೇ ಕಾರು ಹುಣ್ಣಿಮೆ. ಹುಣ್ಣಿಮೆಯ ದಿವಸ ಮುಂಜಾನೆ ಸೂರ್ಯೋದಯದೊಂದಿಗೆ ರೈತರ ಕಾರ್ಯ ಚಟುವಟಿಕೆಗಳು ಆರಂಭವಾಗುತ್ತವೆ. ಒಕ್ಕಲುತನದ ಸಲಕರಣೆಗಳಾದ ಕುಂಟಿ, ಕೂರಿಗೆ, ಎಡೆಕುಂಟೆ, ಮಡಿಕೆ (ನೇಗಿಲು) ನೊಗ, ಕುಡಾ, ಬಾಣಿ, ಕೊಡಲಿ, ಕುಡಗೋಲು, ಗುದ್ಲಿ ಮುಂತಾದವುಗಳನ್ನು ಸ್ವಚ್ಛವಾಗಿ ತೊಳೆದು ಚೀಲದ ತಟ್ಟು ಹಾಸಿ ಮನೆಯ ಮುಂದಿನ ಕಟ್ಟೆಗೆ ಇಡುತ್ತಾರೆ. ಇದು ಒಂದು ನಿಟ್ಟಿನ ಕೆಲಸವಾದರೆ, ಮತ್ತೊಂದೆಡೆಗೆ ಎತ್ತು, ಎಮ್ಮೆ, ದನ–ಕರುಗಳಿಗೆ ಮೈ ತೊಳೆದು ಬಿಸಿಲಿನ ಕಟ್ಟುತ್ತಾರೆ. ಇನ್ನೊಂದೆಡೆಗೆ ಕಾರಹುಣ್ಣಿಮೆಗೆ ಮೊದಲೆ ನಾರು ನೂಲಿನಿಂದ ಹೊಸೆಯಲು ಆರಂಭಿಸಿದ ಚಿಲಕಣ್ಣಿ, ಗಳೇವು, ಮಿಣಿ, ಎಡಕುಂಟೆ ಮಿಣಿ ಮಲಗೆ ಮುಗಿಸಿ ಒಂದೊಂದು ತರಹದ ಬಣ್ಣ ಎದ್ದಿ ಬಿಸಿಲಿಗೆ ಹಾಕುತ್ತಾರೆ. ಎತ್ತುಗಳ ಮೈಗೆ ಹಸ್ತದಿಂದ ಗುರುತುಗಳನ್ನು ಹಾಕಿ ಅವುಗಳ ಕೋಡುಗಳಿಗೆ ಬಣ್ಣವನ್ನು ಹಚ್ಚುತ್ತಾರೆ. ಕುಂಟಿ–ಕುಡದ ಬಳೆ ಮತ್ತು ಉಳ್ಳಾಗಡ್ಡಯಲ್ಲಿ ಕೊರೆದ ಚಿತ್ರದಿಂದ ಎತ್ತುಗಳ ಮೈಮೇಲೆ ತರತರಹದ ಚಿತ್ತಾರಗಳನ್ನು ಬಿಡಿಸುತ್ತಾರೆ. ಇದನ್ನು ಇವರು ಬಹಳ ಸಂತೋಷದಿಂದ ಮಾಡುತ್ತಾರೆ. ಎಮ್ಮೆಗಳಿಗೆ ಮಾತ್ರ ಸುಣ್ಣ ಸುರಮಂಜಿನ ಹಸ್ತ ತೆಗೆದು ಒಂದು ಕಡೆಗೆ ಸುಣ್ಣ ಇನ್ನೊಂದು ಕಡೆಗೆ ಸುರಮಂಜನ್ನು (ಜಾಜು) ಬಳಿಯುತ್ತಾರೆ. ಅದೇ ಸುಣ್ಣ, ಸುರಮಂಜನ್ನು ತೆಗೆದುಕೊಂಡು ಈ ಮೊದಲು ನತೊಳೆದಿಟ್ಟ ಒಕ್ಕಲುತನದ ಸಲಕರಣೆಗಳಿಗೆ ಹಚ್ಚುತ್ತಾರೆ. ಜೊತೆಗೆ ದನಕರುಗಳನ್ನು ಕಟ್ಟುವ ಗೂಟ, ಹಗ್ಗ, ಸರಪಳಿಗೆಲ್ಲಾ ಸವರುತ್ತಾರೆ. ಮನೆಯ ಬಾಗಿಲುಗಳಿಗೆ ನಾನಾ ಹಸಿರು, ನೀಲಿ ಬಣ್ಣಗಳನ್ನು, ಅಗಸಿ ಎಣ್ಣೆಯನ್ನು ಹಚ್ಚಲಾಗುವುದು. ಈ ಯಾವ ಕೆಲಸದಲ್ಲಿಯೈ ಹೆಚ್ಚಾಗಿ ಭಾಗವಹಿಸದೇ ಇದ್ದ ಹೆಂಗಸರು ಮಾತ್ರ ಬೇಳೆ ಹಾಕಿ ಹೊತ್ತು ಮುಳುಗುವುದರೊಳಗಾಗಿ ಹೋಳಿಗೆ, ಕರಿಗಡಬು, ಅನ್ನ, ಸಾರು ಹಬ್ಬದೂಟ ಸಿದ್ಧಪಡಿಸುತ್ತಾರೆ. ಎತ್ತು, ಆಕಳುಗಳಿಗೆ ಬಾನ ಬೇಯಿಸಿ ಅವುಗಳಿಗೆ ಎಡೆ ಹಿಡಿದು ನಂತರ ಪ್ರತಿಯೊಂದು ಪ್ರಾಣಿಗೂ ಬಾನವನ್ನಿಟ್ಟು ಆ ಮೇಲೆ ತಾವು ಊಟ ಮಾಡುತ್ತಾರೆ. ಇದು ಕಾರಹುಣ್ಣಿಮೆ ಹಬ್ಬದ ಆಚರಣೆ.

**ಎಳ್ಳು ಅಮವಾಸೆ :**

ಒಕ್ಕಲಿಗ ತಾನು ಬೆಳೆಯುವ ಬೆಳೆ ಹಾಗೂ ಭೂಮಾತೆಯನ್ನು ಆರಾಧಿಸುವ ಹಬ್ಬಗಳಲ್ಲಿ ಎಳ್ಳಾಮಸೆ ಪ್ರಮುಖವಾದದ್ದು. ಬಿಳಿಜೋಳ ಆಗ ತಾನೆ ಹೊಡೆ ಬಿಚ್ಚಿಕೊಂಡು ಸುಂಕಕಟ್ಟಿ ಹಾಲುಗಳು ಹಿಡಿಯುತ್ತಿರುತ್ತದೆ. ಅಮವಾಸೆಯ ದಿನದಂದು ಎತ್ತುಗಳು ಮೈ ತೊಳೆದು ಜೂಲಾ

ಹಾಕಿ, ಕೋಡಿಗೆ ರಿಬ್ಬನ್, ಗೊಂಡೆ, ಕೋಡಣಚು, ಗಗ್ರ ಕಟ್ಟಿ ಅದ್ದೂರಿಯಿಂದ ಶೃಂಗಾರ ಮಾಡುತ್ತಾರೆ. ಎಳ್ಳಾಮಾಸೆಗೆ ಎಳ್ಳುಕಾಳಿನಷ್ಟು ಬಿಸಿಲು ಪ್ರಾರಂಭವಾಗಿರುವುದರಿಂದ ಗಾಡಿಗೆ ಸವಾರಿ ಕಟ್ಟುತ್ತಾರೆ. ನಸುಕಿನಲ್ಲಿಯೇ ಎದ್ದು ಹೆಂಗಸರು ಎಳ್ಳು ಹಚ್ಚಿದ ರೊಟ್ಟಿ, ಎಣೆಗಾಯಿ ಪಲ್ಲೆ, ಚಟ್ನಿ, ಹುಳಿಬಾನ, ಹೋಳಿಗೆ, ಕಡಬು, ಅನ್ನ, ಸಾರು, ತಿಂಡಿ–ತಿನಿಸುಗಳನ್ನು ಮಾಡುತ್ತಾರೆ. ಬಿಸಿಲಿಗೆ ಮೊದಲು ಗಾಡಿ ಹೂಡಿ ಬುತ್ತಿ ನೀರು ಇಟ್ಟುಕೊಂಡು ಸಂಬಂಧಿಕರನ್ನು ಕರೆದುಕೊಂಡು ಹೊಲಗಳಿಗೆ ಹೋಗುತ್ತಾರೆ. ಹೊಲದ ಬಲಭಾಗದ ಮೂಲೆಯೊಂದರಲ್ಲಿ ಗಿಡದ ನೆರಳು ನೋಡಿ ಗಾಡಿ ನಿಲ್ಲಿಸಿ ಬುತ್ತಿ ನೀರನ್ನು ಬನ್ನಿಗಿಡದ ಕೆಳಗೆ ಅಥವಾ ಹೊಲದ ಮೂಲೆಯಲ್ಲಿ ಐದು ಚಪ್ಪಟೆಯಾಕಾರದ ಕಲ್ಲುಗಳನ್ನಿರಿಸಿ ಆ ಕಲ್ಲುಗಳಿಗೆ ನೀರು ಚುಮುಕಿಸಿ, ವಿಭೂತಿ, ಕುಂಕುಮ ಹಚ್ಚಿ ಕಾಯಿ ಒಡೆದು ಎಡೆ ಹಿಡಿಯುತ್ತಾರೆ. ಮತ್ತೊಂದೆಡೆಯನ್ನು ಒಬ್ಬರು ಕೈಯಲ್ಲಿ ಹಿಡಿದು ಜೊತೆಗೆ ತಂಬಿಗೆ ತುಂಬಿ 'ಸೆರಗಾ' ಹಿಡಿದುಕೊಂಡು ಹೊಲದ ತುಂಬಾ ಉಲಿಗ್ಗೊ ಉಲಿಗ್ಗೊ ಎಂದು ಆಹಾರವನ್ನು ಭೂಮಾತೆಗೆ ಉಣಬಡಿಸುತ್ತಾರೆ. ಇದಕ್ಕೆ ಜನರು ಸೆರಗಾ ಅಥವಾ 'ಚರಗಾ' ಎಂದು ಕರೆಯುತ್ತಾರೆ.

**ನಾಗರ ಪಂಚಮಿ :**

ಸ್ತ್ರೀ ಪ್ರದಾನವಾದ ಹಲವಾರು ಹಬ್ಬಗಳಲ್ಲಿ ಜೋಕಾಲಿ ಹಬ್ಬವೂ ಒಂದು. ನಾಗರ ಅಮವಾಸೆ, ನಾಗರ ಪಂಚಮಿ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವ ಈ ಹಬ್ಬದಲ್ಲಿ ನಾಗಪ್ಪನಿಗೆ ಹಾಲು ಎರೆಯುವುದು ಹಾಗೂ ಜೋಕಾಲಿ ಹಾಕುವುದು ಪ್ರಮುಖವಾಗಿರುವುದರಿಂದ ನಾಗರ ಪಂಚಮಿಬ ಎಂದೂ ಕರೆಯುತ್ತಾರೆ. ನಾಗರ ಪಂಚಮಿ ನಾಡಿಗೆ ದೊಡ್ಡದು ಎಂದು ಜನರು ಹಾಡುತ್ತಾರೆ. ಮದುವೆಯಾಗಿ ಹೋದ ಹೆಣ್ಣು ಮಗಳು

ಆಷಾಡ ಮಾಸ ಬಂದೀತವ್ವ
ಖಾಸ ಅಣ್ಣ ಬರಲಿಲ್ಲ ಕರಿಯಾಕ

ಎಂದು ಈ ಪರಿಯಾಗಿ ಸರಿಪಡಿಸಬೇಕಾದರೆ ಇದರ ಹಿನ್ನೆಲೆ ಏನಿರಬೇಕೆಂಬುದನ್ನು ಆಲೋಚಿಸಬೇಕಾಗುತ್ತದೆ.

**ನಾಗ ಚೌತಿ :**

ಶ್ರಾವಣ ಶುದ್ಧ ಪಂಚಮಿಯ ದಿವಸವೇ ಈ ನಾಗರ ಪಂಚಮಿ ಹಬ್ಬವನ್ನು ಆಚರಿಸುವುದಕ್ಕೆ ಖಚಿತವಾದ ಆಧಾರಗಳು ಸಿಗದೆ ಹೋದರೂ ಜನಪದ ಕಥೆಯೊಂದು ಇದಕ್ಕೆ ಸಾಕ್ಷಿ ನುಡಿಯುತ್ತದೆ.

ರೈತನೊಬ್ಬನು ಹೊಲದಲ್ಲಿ ನೇಗಿಲು ಹೊಡೆಯುತ್ತಿರುವಾಗ ನೇಗಿಲ ತಾಳಿಗೆ ಸಿಲುಕಿ ಹಾವಿನ ಮರಿಗಳೆಲ್ಲ ಸಾಯಲು ತಾಯಿ ಹಾವು ಸಿಟ್ಟಿಗೆದ್ದು ಆದಿನ ರಾತ್ರಿ ರೈತನ ಮನೆಯವರೆಲ್ಲರನ್ನು ಕಡಿದು ಸಾಯಿಸಿದರೂ ಅದರ ರೋಷ ಕಡಿಮೆಯಾಗುವುದಿಲ್ಲ. 'ಹಾವಿನ ರೋಷ ಹನ್ನೆರಡು ವರುಷ'ವೆಂಬಂತೆ ಸಿಟ್ಟನ್ನಿರಿಸಿಕೊಂಡ ಹಾವು ಪರ ಊರಿನಲ್ಲಿಗೆ ಈ ಮನೆಯ ಹೆಣ್ಣು ಮಗಳೊಬ್ಬಳು ಸೊಸೆಯಾಗಿ ಹೋಗಿದ್ದನ್ನು ತಿಳಿದು ಅವಳನ್ನು ಕಚ್ಚಿ ಕೊಲ್ಲಲು ಹೋಯಿತು. ಅದೇ ಸಮಯದಲ್ಲಿ ಆ ಹೆಣ್ಣು ಮಗಳು ಮಣ್ಣಿನ ನಾಗಪ್ಪನನ್ನು ಮಾಡಿ ಹಾಲೆರೆಯುತ್ತಿರುವುದನ್ನು ಕಂಡು ಸಮಾಧಾನವಾಯಿತು. ತಾನು ಆಕೆಯ ತವರು ಮನೆಯಲ್ಲಿ ರೈತನ ಕುಟುಂಬದವರನ್ನೆಲ್ಲಾ ಬದುಕಿಸುವಂತೆ ನಾಗರಾಜನಲ್ಲಿ ಕೇಳಿಕೊಂಡಳು. ಅವನಿಗೆ ಕರುಣೆ ಬಂದು ಅಲ್ಲಿಗೆ ಹೋಗಿ ಮತ್ತೇ ವಿಷವನ್ನೇಲ್ಲಾ ಹೀರಿಕೊಂಡು ಎಲ್ಲರನ್ನು ಬದುಕಿಸುತ್ತದೆ. ಆಗ ತವರಿಗೆ ಬಂದ ಹೆಣ್ಣು ಮಗಳು ನಾಗಪ್ಪನನ್ನು ಪೂಜಿಸಿದಳು. ಅಂದಿನಿಂದಲೇ ನಾಗಪೂಜೆ ಆರಂಭಗೊಂಡು 'ನಾಗಚೌತಿ', 'ನಾಗರ ಪಂಚಮಿ' ಎಂಬ ಹೆಸರು ಆಚರಣೆಯಲ್ಲಿ ಬಂದು ಹಬ್ಬವಾಗಿ ಪರಿಣಮಿಸಿದೆ. ಈ ಕಾರಣವಾಗಿಯೇ ಹೆಣ್ಣು ಮಕ್ಕಳನ್ನು ತಪ್ಪದೇ ನಾಗ ಪಂಚಮಿಗೆ ತವರು ಮನೆಗೆ ಕರೆತರುತ್ತಾರೆ ಎಂದು ಉಜ್ಜನಿ ಹರಿಜನ ದುರಗಪ್ಪ ಹೇಳುತ್ತಾರೆ.

ಹಬ್ಬ ಇನ್ನೂ ಎಂಟು-ಹತ್ತು ದಿನವಿದೆ ಎನ್ನುವಾಗಲೇ ಗಂಡನ ಮನೆಗೆ ಹೊಸದಾಗಿ ಹೋದ ಮತ್ತು ಒಂದೆರಡು ಹಡೆದ ಹೆಣ್ಣು ಮಕ್ಕಳನ್ನು ತಪ್ಪದೇ ತವರು ಮನೆಗೆ ಕರೆತರುತ್ತಾರೆ. ತವರಿಗೆ ಬಂದ ಹೆಣ್ಣು ಮಕ್ಕಳೆಲ್ಲ ನಾಗಪ್ಪನ ಪೂಜೆಗಾಗಿ ಎಳ್ಳು ಹುರಿಯುವುದು, ಕರದಂಟು, ಸಕ್ಕರೆ, ಬೆಲ್ಲ, ರವ ಉಂಡಿಗಳನ್ನು ಕಟ್ಟುವುದು, ಕರ್ಚಿಕಾಯಿ ಕರೆಯುವುದು ಮುಂತಾದ ಆಹಾರ ಪದಾರ್ಥಗಳನ್ನು ತಯಾರಿಸುತ್ತಾರೆ. ನಾಗರ ಪಂಚಮಿಯ ಮೊದಲ ದಿನ ನಾಗರ ಅಮವಾಸೆ ಅದನ್ನು 'ರೊಟ್ಟಿ ಪಂಚಮಿ' ಎನ್ನುವರು. ಎರಡನೆಯ ದಿನ ನಾಗಚೌತಿ. ಈ ದಿನ (ಚೌತಿಗೆ ಹಾಲು ಹಾಕುತ್ತಾರೆ) ಮೂರನೆಯ ದಿನ ನಾಗರ ಪಂಚಮಿ (ಹುತ್ತಕ್ಕೆ ಹಾಲು ಎರೆಯುವ ದಿನ). ಅಮವಾಸೆಯ ದಿನ ಬಂಧು-ಬಳಗದೊಂದಿಗೆ ಹೆಣ್ಣು ಮಕ್ಕಳು ಹಣತೆ ಪೂಜೆಯನ್ನು ನೆರವೇರಿಸುವರು. ಎರಡನೆಯ ದಿನವೇ ನಾಗಚೌತಿ, ಅಂದು ಹೆಣ್ಣು ಮಕ್ಕಳೆಲ್ಲಾ ಮೈ ತೊಳೆದುಕೊಂಡು ಹೊಸ ಬಟ್ಟೆಯನ್ನುಟ್ಟು ಸಮೀಪದ ನಾಗಚೌತಿಗೆ ಹೋಗಿ ಪೂಜಿಸಿ ಹಾಲೇರೆಯುತ್ತಾರೆ. ನಂತರದ ದಿನ ಹುತ್ತಕ್ಕೆ ಹಾಲೇರೆದು ಅದೇ ಮಣ್ಣನ್ನು ತಂದು ನಾಗಪ್ಪನನ್ನು ಮಾಡಿ ಔಡಲ ಇಲ್ಲವೇ ಎಕ್ಕೆಯ ಎಲೆಯಲ್ಲಿ ಇಟ್ಟು ಅರಿಶಿಣ, ಕುಂಕುಮ, ವಿಭೂತಿ ಹಚ್ಚಿ ಹೂ ಹಾಕಿ ಶೃಂಗಾರ ಮಾಡುವರು. ನಾಗ ಪೂಜೆಯ ಮರುದಿನ ಜೋಕಾಲಿ ಆಡುವ ಸಂಭ್ರಮ ಸಾಮಾನ್ಯವಾಗಿ ಅಂದು ಹೆಂಗಸರು-

ಗಂಡಸರು ಸಣ್ಣ ಹುಡುಗರೆಲ್ಲ ಹೊಸ ಅರಿವೆಯನ್ನುಟ್ಟು ಕೇರಿಯಲ್ಲಿ ದೊಡ್ಡ ದೊಡ್ಡ ಮರಗಳ ಟೊಂಗೆಗಳಿಗೆ ಇಲ್ಲವೇ ಕಂಬ ನೆಟ್ಟು ಕಟ್ಟಿದ ಅಂತರ ಜೋಕಾಲಿಯನ್ನಾಡಲು ಬರುತ್ತಾರೆ.

ಜೋಕಾಲಿ ಹಬ್ಬ ಒಂದೆಡೆ ಈ ರೀತಿ ಉಂಡು-ತಿಂದು ನಡೆದಿದ್ದರೇ, ಇನ್ನೊಂದೆಡೆ ಕೆಲವು ಜೂಜಾಟಗಳು, ಶಕ್ತಿ ಪ್ರದರ್ಶನಗಳು ನಡೆಯುತ್ತವೆ. ಇವುಗಳೊಂದಿಗೆ ಜೋಕಾಲಿ ಹಬ್ಬ, ನಾಗರ ಪಂಚಮಿ ಮುಗಿದಂತೆ.

**ದಸರಾ ಹಬ್ಬ :**

ನಮ್ಮ ನಾಡಿನಲ್ಲಿ ತುಂಬಾ ವಿಚಿತ್ರವಾದ ಹಬ್ಬಗಳಿವೆ. ಅಂದರೆ 'ಹೋಳಿಗೆ ತಿಂದು ಹೊಯ್ಕೊಳುದು ಹೋಳಿಹಬ್ಬ' ಮನಿಕೂಳು ತಿಂದು ಮಂದಿಕಾಲ ಹಿಡಿಯೋದು ಮಹಾನವಮಿ ಹಬ್ಬ ಇದನ್ನು ಬನ್ನಿ ಹಬ್ಬ, ನವರಾತ್ರಿ, ಮಹಾನವಮಿ ದಸರಾ, ವಿಜಯ ದಶಮಿ, ನಾಡಹಬ್ಬ ಎಂದೆಲ್ಲಾ ಕರೆಯುತ್ತಾರೆ. ಸಾಮಾನ್ಯವಾಗಿ ಪ್ರತಿ ಹಬ್ಬಕ್ಕೂ ಒಂದು ಪೌರಾಣಿಕ ಇತಿಹಾಸವಿರುವಂತೆ ಬನ್ನಿ ಹಬ್ಬಕ್ಕೂ ಹಿನ್ನೆಲೆಯಿರುವುದು ಜನಪದ ಹಾಡುಗಳಿಂದ ತಿಳಿದುಬರುತ್ತದೆ.

"ಕಲ್ಲ ಕಡಬವ ಮಾಡಿ ಮುಳ್ಳು ಶ್ಯಾವಿಗೆ ಮಾಡಿ
ಬನ್ನೀ ಎಲೆಯಾಗ ಎಡಿ ಮಾಡಿ ಪಾಂಡವರು
ಉಂಡೋ ಹೋಗ್ಯಾರೋ ವನವಾಸ"
"ಬನ್ನೀ ಗಿಡದಾಗ ಬಾಣ ಇಟ್ಟೇವಿ ತಾಯಿ
ಯಾರು ಬಂದರೂ ಕೊಡಬ್ಯಾಡ। ಹಡದವ್ವ
ಅರ್ಜುನ ಬಂದರ ಕೊಡಬೇಕು"

ಎಂಬ ತ್ರಿಪದಿಗಳು ಬನ್ನಿ ಪೂಜೆಯ ಪ್ರಾಚೀನತೆಯನ್ನು ಮಹಾಭಾರತದ ಕಾಲಕ್ಕೆ ಒಯ್ಯುತ್ತದೆ. ಮಹಾನವಮಿಯಲ್ಲಿ ಬನ್ನೀ ಗಿಡವನ್ನು ಪೂಜಿಸಿ ಒಬ್ಬರಿಗೊಬ್ಬರು ಬನ್ನಿಯನ್ನು ಕೊಡುಕೊಳ್ಳುವಿಕೆಯಿಂದ ಬನ್ನಿ ಹಬ್ಬವೆಂದು, ದಸರಾ ಹಬ್ಬ ಎಂದೂ ಕರೆದಿದ್ದಾರೆ.

ಮಹಾಲಯ ಅಮವಾಸೆ ಇನ್ನೂ ಮುಂದೆ ಇರುವಾಗಲೇ ಮನೆ-ಮಾರು ಸಾರಿಸುವುದು, ಹಾಸಿಗೆ-ಹೊದಿಕೆಗಳನ್ನು ಒಗೆಯುವುದು ಮೊದಲಾದ ಕೆಲಸಗಳು ಆರಂಭಗೊಳ್ಳುತ್ತವೆ. ಇದು ಒಟ್ಟು ಒಂಬತ್ತು ದಿನಗಳವರೆಗೆ ನಡೆಯುವ ಹಬ್ಬ. ಆಶ್ವಿಜ ಶುಕ್ಲ ಪ್ರತಿಪದಿ ಪಾಡ್ಯದಿಂದ ಹಿಡಿದು ದಶಮಿಯವರೆಗಿನ ಆಚರಣೆಯಲ್ಲಿ ನಾಲ್ಕು ಹಂತಗಳಾಗುತ್ತವೆ.

ಮೊದಲ ದಿನ ಅಮಾವಾಸೆ ನಂತರ ಪ್ರತಿಪದ ದ್ವಿತಿಯಾ, ತೃತಿಯಾಗಳೆಂದು ಮೂರು ದಿನ ರೋಗ-ರುಜಿನ, ದುಃಖ-ದುಮ್ಮಾನಗಳ ಪರಿಹಾರಕ್ಕಾಗಿ ದುರ್ಗಾ ಪೂಜೆಯನ್ನು ಕೈಗೊಳ್ಳುತ್ತಾರೆ. ಎರಡನೆಯದಾಗಿ ಚತುರ್ಥಿ, ಪಂಚಮಿ, ಷಷ್ಠಿ ಈ ಮೂರು ಸುಖ-ಸಂಪತ್ತು, ಸಮೃದ್ಧಿಗೊಳ್ಳುವಂತೆ ಲಕ್ಷ್ಮೀಯನ್ನು ಆರಾಧಿಸುವರು. ಮೂರನೆಯದಾಗಿ ಸಪ್ತಮಿ, ಅಷ್ಟಮಿ, ನವಮಿ ಈ ಮೂರು ದಿನ ವಿದ್ಯಾ-ಬುದ್ಧಿ, ಜ್ಞಾನಗಳು ಹೆಚ್ಚಲೆಂದು ಸರಸ್ವತಿಯನ್ನು ಪೂಜಿಸುವರು. ಹೀಗೆ ಮೂರು ಹಂತಗಳಲ್ಲಿ ಶಕ್ತಿ ಪೂಜೆ ನಡೆಯುವುದರಿಂದ ಈ ಹಬ್ಬಕ್ಕೆ ನವರಾತ್ರಿ, ಮಹಾನವಮಿ ಎಂದು ಕರೆಯುತ್ತಾರೆ. ನಾಲ್ಕನೆದಾಗಿ ಈ ಹಬ್ಬದ ಪರಿಸಮಾಪ್ತಿಯೆಂಬಂತೆ ಬರುವ ಹತ್ತನೆಯ ದಿನವೇ ದಶಮಿ. ಅದನ್ನೇ 'ವಿಜಯ ದಶಮಿ' ಎನ್ನುತ್ತಾರೆ. 'ದಶಹರ್' ಎಂದರೇ ಹತ್ತು ದಿನಗಳ ರಾತ್ರಿ ಹಬ್ಬವನ್ನು ಆಚರಿಸುವುದರಿಂದ 'ದಸರಾ' ಎಂದು ಹೆಸರು ಬಂದಿದೆ. ದಶಮಿಯ ದಿನದಂದು ಆಯಾ ವೃತ್ತಿಯವರು ತಮ್ಮ ತಮ್ಮ ಸಾಮಗ್ರಿಗಳನ್ನು ಪೂಜಿಸುತ್ತಾರೆ. ಕೆಲವರು ತಮ್ಮ ಅಂಗಡಿ, ಗಿರಣಿ, ಟ್ರ್ಯಾಕ್ಟರ್, ಟ್ರಕ್ಕುಗಳನ್ನು ಪೂಜಿಸುತ್ತಾರೆ. ಇದನ್ನು ಆಯುಧ ಪೂಜೆ ಅಥವಾ ಖಂಡ ಪೂಜೆ ಎಂದು ಕರೆಯುತ್ತಾರೆ. ಮೂರು ಜಂಜೇಲಿ ಆರತಿ ಹಿಡಿದು ಮುತ್ತೈದೆರೊಂದಿಗೆ ಊರ ಪ್ರಮುಖರು ಸೇರಿದಂತೆ ಮಜಲು, ಮೇಳ ಮೊದಲಾದವುಗಳೊಂದಿಗೆ ಬನ್ನಿ ಪೂಜೆ ಮಾಡುವರು. ಮನೆಯ ಗ್ರಾಮದೇವತೆಗಳಿಗೆ ಜೋಳದ ದಂಟು, ಮೊಳೆಯ ಕಂಬ ಇಟ್ಟಂತೆ ಇಲ್ಲಿಯೂ ಇಟ್ಟು ಪೂಜಿಸುತ್ತಾರೆ. ಇಲ್ಲಿ ಪೂಜೆಗೊಂಡವಳು ಬನ್ನಿ ಮಹಾಂಕಾಳಿಯಾಗುವಳು. ಅಲ್ಲಿಯೇ ಎಲ್ಲರೂ ಸಾಮೂಹಿಕವಾಗಿ ಬನ್ನಿ ಮುಡಿದು ಓಣಿಗೆ ಬಂದು ತಮ್ಮ ಸಂಬಂಧಿಕರುಗಳಿಗೆಲ್ಲಾ ಸ್ನೇಹಿತರಿಗೆ ಮುಖ್ಯವಾಗಿ ಹಿರಿಯರಿಗೆ ಬನ್ನಿ ಕೊಟ್ಟು ಕಾಲಿಗೆ ಬಿಳುವುದು, ಕೈ ಮುಗಿಯುವುದು ನಡೆಯುತ್ತದೆ. ಈ ಚಿತ್ರಣ ತ್ರಿಪದಿಯೊಂದರಲ್ಲಿ ತುಂಬಾ ಸೋಗಸಾಗಿ ಮೂಡಿಬಂದಿದೆ.

ಬನ್ನಿ ಮುಡಿಯೊಂದು ಬಂತು ಬಂಗಾರ ಕೊಡೋದು ಬಂತು
ಬಂದು ನನಕಾಲ ಹಿಡಿದಾನ। ನನ್ನ ತಮ್ಮ
ಬಂಗಾರ ಮೂಲ ನನಗಿರಲಂತ

ಬನ್ನಿ ಹಬ್ಬವೂ ಕೂಡ ಜಾತಿ-ಮತದ ಗಡಿಯನ್ನ ಮೀರಿ ಆಚರಿಸಲ್ಪಡುವ ಹಬ್ಬ. ಯಾವ ಜಾತಿ, ಲಿಂಗ, ವಯಸ್ಸಿನ ಬೇಧವಿಲ್ಲದೇ ಬನ್ನಿಯನ್ನು ಕೊಟ್ಟು "ನಾವು ನೀವು ಬಂಗಾರದಂಗ ಇರೋನ" ಎಂದು ಹೇಳುವ ಒಂದೇ ವಯಸ್ಸಿನವರು ಸ್ನೇಹಿತರು "ಗಡಾ ಮಕ್ಕಳಾಗ್ಲಿ" ಎಂದು ಹರಸುವ ಹಿರಿಯರ ಆಶೀರ್ವಾದ ಬನ್ನಿ ಕೊಟ್ಟು ಬಾಗಿ ಕಾಲು ಹಿಡಿಯುವವರಿಗೆ ಇರ್ಲಿ ಇರ್ಲಿ ಬಿಡು ಎಂದು ಹೇಳುವ ಹಿರಿಯರ ಸೌಜನ್ಯತೆ ಈ ಹಬ್ಬದ ದಿನ ಮಧ್ಯ ರಾತ್ರಿವರೆಗೂ

ನಡೆಯುತ್ತವೆ. ಬನ್ನಿ ಹಬ್ಬ ಕೇವಲ ಒಂದು ಮನೆತನದವರಿಗೆ ಮಾತ್ರ ಸೀಮಿತವಾಗಿರದೇ ಇಡೀ ನಾಡಿನ ಹೊರಗೆ ಪ್ರೀತಿ, ಪ್ರೇಮ, ವಿಶ್ವಾಸ ಹಂಚಿಕೊಂಡು ಹರುಷಪಡುವ ಹಬ್ಬವಾಗಿದೆ.

**ದೀಪಾವಳಿ :**

ದೀಪಗಳ ಹಾವಳಿಯನ್ನು ತಂದೊಡ್ಡುವ ದೀಪಾವಳಿ ಉಜ್ಜಿನಿ ಜನರು ಆಚರಿಸುವ ನಾಡಹಬ್ಬಗಳಲ್ಲಿ ಒಂದು. 'ಉಂಡದ್ದೇ ಉಗಾದಿ, ಮಿಂದದ್ದೇ ದೀಪಾವಳಿ' ಮೈಮನವನ್ನು ಬೆಳಗಿಸಿ ಶುಭ್ರಗೊಳಿಸುವ ಹಬ್ಬವಾಗಿದೆ. ಇತರ ಹಬ್ಬಗಳಯಂತೆ ಈಗಲೂ ಮಡಿ-ಮೈಲಿಗೆಯನ್ನು ತಪ್ಪದೇ ಕಾಯ್ದುಕೊಳ್ಳುತ್ತಾರೆ. ಅಮವಾಸೆಯ ದಿನ ಮನೆಯ ಒಳ ಹೊರಗೆ ಸಾಲು ದೀಪಗಳನ್ನು ಹಚ್ಚುತ್ತಾರೆ. ಗಂಡನ ಮನೆಯಿಂದ ಬಂದ ಹೆಣ್ಣು ಮಕ್ಕಳು ತಮ್ಮ ಅಣ್ಣ-ತಮ್ಮಂದಿರೊಂದಿಗೆ ಪೀಡೆ ಹೋಗಿ ಆಯುಷ್ಯ ಹೆಚ್ಚಲೆಂದು ಆರತಿ ಬೆಳಗುತ್ತಾರೆ. ಅದಕ್ಕೆ ಪ್ರತಿಯಾಗಿ ಅಕ್ಕ-ತಂಗಿಯರಿಗೆ, ಸೊಸೆಯರಿಗೆ ಸೀರೆ, ಕುಪ್ಪಸ, ಹಣ, ಬಂಗಾರ ಅವರ ಶಕ್ತ್ಯಾನುಸಾರ ಕೊಡುವ ಪದ್ಧತಿ ಇದೆ. ಮರುದಿನ ದೀಪಾವಳಿಯ ಪಾಡ್ಯ ಅಂದು ಲಕ್ಷ್ಮಿಗೆ ಮತ್ತೆ ವಿಶೇಷ ಪೂಜೆ ಇರುತ್ತದೆ. ಕಿರಾಣಿ, ಹೊಟೇಲ್‌ಗಳು, ಅಂಗಡಿಗಳ ವ್ಯಾಪಾರಸ್ಥರು ಹೆಚ್ಚು ಉಜ್ಜಿನಿಯಲ್ಲಿ ಇರುವುದರಿಂದ ಇವರ ಪೂಜೆ ಬಹಳ ಅದ್ದೂರಿಯಿಂದ ಜರುಗುತ್ತದೆ. ಇಲ್ಲಿಗೆ ದೀಪಾವಳಿ ಹಬ್ಬದ ವಿಶೇಷತೆ ಮುಗಿದಂತೆ.

**ಮೊಹರಂ :**

ಮುಸಲ್ಮಾನರ ಹನ್ನೆರಡು ತಿಂಗಳಲ್ಲಿಯ ಮೊದಲ ತಿಂಗಳ ಹೆಸರೇ ಮೊಹರಂ. ಈ ತಿಂಗಳಿನ ಮೊದಲ ಹತ್ತು ದಿನ ಆಚರಿಸುವ ಹಬ್ಬವೇ ಮೊಹರಂ ಎಂದು ಕರೆಯುತ್ತಾರೆ. ಇದು ಮೇಲು ನೋಡಲಿಕ್ಕೆ ಮುಸಲ್ಮಾರ ಹಬ್ಬವಾಗಿದ್ದರೂ ಹಿಂದೂ-ಮುಸ್ಲಿಂರೆಲ್ಲರೂ ಒಟ್ಟಿಗೆ ಸೇರಿ ವಿಜೃಂಭಣೆಯಿಂದ ಆಚರಿಸುವ ಹಬ್ಬವಾಗಿದ್ದು, ಸರ್ವಧರ್ಮ ಸಮನ್ವಯವನ್ನು ಸಾರುವ ಹಬ್ಬವಾಗಿದೆ.

**ಹಬ್ಬದ ಹಿನ್ನೆಲೆ :**

ಮಹಮದ್ ಪೈಗಂಬರ್‌ರ ತರುವಾಯ ಇಸ್ಲಾಂ ಸಾಮ್ರಾಜ್ಯಕ್ಕೆ ಧರ್ಮ ಪ್ರಭುಗಳನ್ನು (ಖಲೀಫರನ್ನು) ಆಯ್ಕೆ ಮಾಡುತ್ತಾ ಬಂದರು. ಪ್ರಜಾಪ್ರಭುತ್ವದ ಆಧಾರದ ಮೇಲೆ ಆಯ್ಕೆಯಾಗುತ್ತಾ ಬಂದ ಈ ಮುಖಂಡರಲ್ಲಿ ನಾಲ್ಕನೆಯವರು ಹಜರತ್ ಅಲಿ. ಇವನು ಖಲೀಫನೆಂದು ಘೋಷಿಸಿಕೊಂಡನು. ನಂತರ ಇವನ ಮಗ ಯಜೀದನೂ ಇದೇ ರೀತಿ ಮಾಡಿದನು. ಈತನ ದಬ್ಬಾಳಿಕೆಯನ್ನು ತಾಳಲಾರದೇ ಕೆಲವರು ಹಜರತ್ ಅಲಿಯ ಮಗ ಇಮಾಮ್‌ನನ್ನು ಪಟ್ಟಕ್ಕೆ ತರಲು ಪ್ರಯತ್ನಿಸಿದರು. ಆದರೆ ಯಜೀವನು ಮೋಸದಿಂದ ವಿಷಹಾಕಿ ಅವನನ್ನು ಕೊಂದನು. ಹಸನ್‌ನನ್ನು ತಮ್ಮ ಹುಸೇನ್‌ನನ್ನು ಪಟ್ಟಕಟ್ಟಿ ಯಜೀದ್‌ನ ಸೊಕ್ಕನ್ನು ಮುರಿಯಲು ಹೋರಾಡಿದನು. ಅಧಿಕಾರದ

ಆಸೆಗಾಗಿ ಧರ್ಮವಂತರ ವಿರುದ್ಧ ಬಂಡೆದ್ದ ಯಜೀದ್‌ನಿಗೆ ಹಸೇನ್-ಹುಸೇನ್ ಮತ್ತು ಇವರ ಅನುಯಾಯಿಗಳು ಶರಣಾಗತರಾಗದೇ ಧರ್ಮಕ್ಕಾಗಿ ಹೋರಾಡಿ ವೀರ ಮರಣವನ್ನು ಅಪ್ಪಿದ ದುರಂತ ಕಥೆಯೇ ಇಂದಿನ ಮೊಹರಂ ಹಬ್ಬ ಆಚರಣೆಯಾಗಿದೆ ಎಂದು ಉಜ್ಜಿನಿ ಅಬ್ದುಲ್ ಕಲಾಂರ (ಬಿಲ್ ಕಲೆಕ್ಟರ್) ಹೇಳಿಕೆ.

ಮೊಹರಂ ತಿಂಗಳು ಆರಂಭಗೊಳ್ಳುವುದಕ್ಕೆ ಮೊದಲೇ ಮುಸ್ಲಿಂರು ತಮ್ಮ ಮನೆಯನ್ನು ಬಳಿದು, ಹಾಸಿಗೆ-ಹೊದಿಕೆಗಳನ್ನು ತೊಳೆದು, ಮಡಿ-ಮೈಲಿಗೆಯನ್ನು ಕಾಪಾಡುತ್ತಾರೆ. ಜೊತೆಗೆ ಮಸೀದಿಗೂ ಸುಣ್ಣ-ಬಣ್ಣ ಬಳಿಯುತ್ತಾರೆ. ಚಂದ್ರ ಕಂಡ ದಿನ ಮೊಹರಂದ ಕೊನೆಯ ದಿನವೆಂದು ಪಶ್ಚಿಮಕ್ಕೆ ಮುಖಮಾಡಿ ನಿಂತು ಮುಲ್ಲಾಪಾತೆ ಕೂಡುತ್ತಾನೆ. ಒಬ್ಬರು ಗುದ್ದಲಿಯಿಂದ ಐದಾರು ಕಚ್ಚುಗಳನ್ನು ಹಾಕುತ್ತಾರೆ. ಇದನ್ನೇ 'ಗುದ್ದಲಿ ಹಾಕುವುದು' ಎನ್ನುತ್ತಾರೆ. ನಂತರ ಉಳಿದವರು ಗುದ್ದಲಿ ಬಿದ್ದವು ಎಂದು ಹೇಳುತ್ತಾರೆ. ಮರುದಿನ ಮುಜಾವರನನ್ನು ಕರೆದು ಅದೇ ಜಾಗದಲ್ಲಿ ದೊಡ್ಡದಾದ ಕುಣಿ ತೋಡಿ ಸುತ್ತಲೂ ಸೊಂಟದಮಟ ಕೆಸರಿನ ಬಂಡಿ ಕಟ್ಟುವರು. ಇದಕ್ಕೆ 'ಅಲಾಯಿ ಕುಣಿ' ಎಂದು ಕರೆಯುತ್ತಾರೆ.

**ಕಾರ್ತಿಕೋತ್ಸವ :**

ದೀಪಾವಳಿ ಅಮವಾಸೆ ದಿನದಿಂದ ಉಜ್ಜಿನಿ ಪೀಠದ ಶ್ರೀ ಮರುಳುಸಿದ್ಧೇಶ್ವರ ಸ್ವಾಮಿ ದೇವಾಲಯದಲ್ಲಿ ಆರಂಭವಾಗುವ ಕಾರ್ತಿಕೋತ್ಸವವು ನಲವತ್ನಾಲ್ಕು ದಿನಗಳ ಕಾಲ ನಿರಂತರವಾಗಿ ನಡೆದು ಹೊಸ್ತಿಲ ಹುಣ್ಣಿಮೆಯ ದಿನ ಕೊನೆಗೊಳ್ಳುತ್ತದೆ. ಈ ೪೪ ದಿನಗಳಲ್ಲಿ ಒಟ್ಟು ಲಕ್ಷ ದೀಪಗಳನ್ನು ಬೆಳಗಿಸಿ ಪ್ರತಿದಿನ ಮದಾಲ್ಸಿ ನಡೆಸಲಾಗುತ್ತದೆ. ಪ್ರತಿನಿತ್ಯ ಬೆಳಿಗ್ಗೆ ಹಾಗೂ ಸಾಯಂಕಾಲ ರುದ್ರಾಭಿಷೇಕ, ಬಿಲ್ವಾರ್ಚನೆಯ ಪೂಜಾ ಸೇವೆ ನಡೆಯುತ್ತದೆ. ಪ್ರತಿದಿನ ಉತ್ಸವ ಮೂರ್ತಿಯೊಂದಿಗೆ ಶ್ರೀ ದೇವಾಲಯದ ಸುತ್ತ ಪ್ರದರ್ಶನ ಮಾಡಲಾಗುತ್ತದೆ. ಪ್ರದರ್ಶನವನ್ನು ಸಮಾಳ, ನಂದಿಕೋಲು, ಶಹನಾಯಿ ಮೇಳದೊಂದಿಗೆ ನೆರವೇರಿಸಲಾಗುವುದು. ೪೪ ದಿನಗಳ ನಂತರದ ಕೊನೆಯ ದಿನ ವಿಜೃಂಭಣೆಯ ಪೂಜೆ ಮತ್ತು ಪ್ರದರ್ಶನ ನಡೆಯುತ್ತದೆ. ಗುಡಿಯ ತುಂಬ ಎಣ್ಣೆ ದೀಪಗಳ ಬೆಳಗಿಸುವಿಕೆ ಜೊತೆಗೆ ವಿದ್ಯುತ್ ದೀಪಗಳ ಅಲಂಕರಣ ಮಾಡುಲಾಗುತ್ತದೆ.

ಡಿಸೆಂಬರ್ ತಿಂಗಳ ಚಳಿಯ ನಡುವೆ ದೀಪಗಳ ಬೆಳಕು ಮತ್ತು ಬಿಸಿ ಹಿತವನ್ನು ಕೊಡುತ್ತದೆ. ಜ್ಯೋತಿಯ ಬಲದಿಂದ ತಮಂಧದ ಕೇಡು ಎನ್ನುವಲ್ಲಿ ಈ ಕಾರ್ತಿಕ ದೀಪಗಳಿಂದ ಬಾಳಿನ ಕತ್ತಲು ಮತ್ತು ಭೌತಿಕ ಕತ್ತಲು ಮಾಯವಾಗುತ್ತದೆ. ಪ್ರತಿಯೋರ್ವನೂ ಜ್ಞಾನದ ಮಾರ್ಗದತ್ತ ಜೀವನದ ಕತ್ತಲು ನಶಿಸಿ ಸುಂದರ ಬೆಳಕಿನತ್ತ ಪಯಣಿಸುವುದೇ ಆಗಿದೆ.

ಮರುಳುಸಿದ್ಧೇಶ್ವರ ಸ್ವಾಮಿಯ ಕಾರ್ತಿಕೋತ್ಸವದ ನಂತರ ಊರಿನಲ್ಲಿ ಉಳಿದ ದೇವರ ಕಾರ್ತಿಕ ನಡೆಯುತ್ತದೆ. ಅವುಗಳಲ್ಲಿ ಬನ್ನಿ ಮಹಾಂಕಾಳಿ, ಬೀರಲಿಂಗೇಶ್ವರ, ಆಂಜನೇಯ, ಮೈಲಾರಲಿಂಗ, ಹರಳಯ್ಯ, ಸಾಳೇಶ್ವರ, ಉಚ್ಚಂಗಮ್ಮ ಈ ಮೊದಲಾದ ದೇವಾನುದೇವತೆಗಳ ಕಾರ್ತಿಕೋತ್ಸವ ಪೂಜೆಗೊಳ್ಳುವ ವಾರದಂದು ನಡೆಯುತ್ತದೆ.

**ತೇರಿನ ಗಾಲಿ ಹೊರಹಾಕುವುದು :**

ದವನದ ಹುಣ್ಣಿಮೆ (ಹಂಪಿ ಹುಣ್ಣಿಮೆ)ಯ ದಿನದಿಂದ ಐದು ದಿನದಲ್ಲಿ ಉಜ್ಜಿನಿ ಮರುಳುಸಿದ್ಧೇಶ್ವರ ಸ್ವಾಮಿಯ ರಥೋತ್ಸವದ ಸಿದ್ಧತೆಗಾಗಿ ತೇರಿನ ಗಡ್ಡೆನ್ನು ಕಟ್ಟುವ ಸ್ಥಾನಕ್ಕೆ ಎಳೆದೊಯ್ಯುವುದು. ಈ ದಿನದಿಂದ ೧೫ ದಿನಗಳ ನಂತರ ರಥೋತ್ಸವ ಮಡೆಯುತ್ತದೆ. ಉಜ್ಜಿನಿ ಪೀಠದ ಉಪಾಚಾರ್ಯರ ಸಮ್ಮುಖದಲ್ಲಿ ತೇರಿನ ಮನೆಯಿಂದ ಪಾದಗಟ್ಟೆಯ ಬಳಿಯಿರುವ ಕಟ್ಟು ಕೇಂದ್ರಕ್ಕೆ ವಿಜೃಂಭಣೆಯಿಂದ ಊರಿನ ಜನತೆಯೆಲ್ಲ ಭಾಗವಹಿಸಿ ಎಳೆದೊಯ್ಯುತ್ತಾರೆ. ಅಂದು ಯಾರೂ ಎತ್ತು-ಬಂಡಿ ಹೂಡುವಂತಿಲ್ಲ. ಎತ್ತುಗಳು ಬಸವನ ಸ್ವರೂಪ ಪೂಜಾರ್ಹವಾದ್ದರಿಂದ ಅವುಗಳಿಗೆ ಕೆಲಸದಿಂದ ರಜೆ ಕೊಡಲಾಗುತ್ತದೆ.

**೫.೩. ಮರುಳುಸಿದ್ಧೇಶ್ವರನ ಜಾತ್ರೆ ಮತ್ತು ರಥೋತ್ಸವ :**

ಉಜ್ಜಿನಿ ಮರುಳುಸಿದ್ಧೇಶ್ವರ ಜಾತ್ರೆಯ ವೈಶಾಖ ಶುದ್ಧ ೫ರಂದು ಶ್ರೀದಾರುಕ ಜಯಂತಿ ಇರುವುದರಿಂದ ಈ ರಥೋತ್ಸವ ನಡೆಯುವುದು. ಈ ಚಾರಿತ್ರಿಕ ದಿನೋತ್ಸವದಿಂದಲೇ ಈ ಸದ್ಧರ್ಮ ಸಿಂಹಾಸನಾಧೀಶ್ವರರು ಪಂಚಾಚಾರ್ಯರೆಂಬುದು ವಿಶಾದವಾಗುತ್ತದೆ. ಏಕೆಂದರೆ ಪರಶಿವನ ೨೮ರಲ್ಲಿ ಒಬ್ಬರಾದ ದಾರುಕರು ಕಲಿಯುಗದಲ್ಲಿ ಮರುಳಾರಾಧ್ಯರೆಂಬ ಅಭಿದಾನದಿಂದ ವಟಸಿದ್ಧೇಶ್ವರ ಲಿಂಗದಿಂದ ಅವಿರ್ಭವಿಸಿ ಭೂಲೋಕದವರೆಗೆ ಶಿವತತ್ವೋಪದೇಶವನ್ನು ಮಾಡಿದರು. ಹಾಗೆ ಅರ್ಪಿಸಿದ ಮಹಾದಿನವೇ ವೈಶಾಖ ಶುದ್ಧ ಪಂಚಮಿ ಅದರ ಸಂಕೇತವೇ ಉಜ್ಜಿನಿಯಲ್ಲಿ ನಡೆಯುವ ರಥೋತ್ಸವದ ಮೊದಲು ೩-೪ದಿನಗಳ ಮುಂಚೆಯೇ ಸಿಂಗಾರ ಕಾರ್ಯ ಮಾಡಲಾಗುತ್ತದೆ.

೧. ರಥದ ನಿಲುವುಗಳನ್ನು ಕಟ್ಟುವುದು

೨. ರಥವನ್ನು ಸ್ವಚ್ಛಗೊಳಿಸಿ ಎಣ್ಣೆ ಹಚ್ಚುವುದು

೩. ರಥಕ್ಕೆ ವಿವಿಧ ಬಣ್ಣದ ಪಟಗಳನ್ನು ಕಟ್ಟುವುದು

೪. ರಥಕ್ಕೆ ನಿಲುವುಗಳ ಮೇಲೆ ಜಲ್ಲಿಯನ್ನು ಕಟ್ಟುವುದು

೫. ಜಲ್ಲಿಯ ಮೇಲೆ ಶುಭ್ರವಾದ ಬಟ್ಟೆಯನ್ನು ಕಟ್ಟುವುದು

೬. ಜಲ್ಲಿಯ ಮೇಲೆ ಕಳಶವನ್ನು ಇಡುವುದು.

ಅನಂತರ ದೇವರನ್ನು ತಂದು ರಥೋತ್ಸವ ದಿನದಂದು ಸಕಲ ಮರ್ಯಾದೆಯೊಂದಿಗೆ ಬಾಜಾ ಭಜಂತ್ರಿ, ಮೇಳ, ನಂದಿಧ್ವಜ ಮುಂತಾದವುಗಳಿಂದ ಗೌರವಪೂರ್ವಕವಾಗಿ ಪ್ರತಿಷ್ಠಾಪನೆ ಮಾಡಿದ ನಂತರ ಪಂಚ ಪೀಠಾಧೀಶ್ವರರ ಆಜ್ಞೆ ಹೊರಡಿಸಿದ ನಂತರ ರಥವನ್ನು ಎಳೆಯುವ ಕಾರ್ಯವನ್ನು ಸಾವಿರಾರು ಭಕ್ತರು ಭಕ್ತಿ–ಗೌರವಗಳಿಂದ ಮಾಡುತ್ತಾರೆ. ರಥ ಎಳೆಯುವುದಕ್ಕಿಂತ ಮುಂಚೆ ರಥದ ಎರಡು ಚಕ್ರಗಳಿಗೆ ತೆಂಗಿನಕಾಯಿ ಒಡೆಯುವುದು ವಿಶೇಷ ಆಚರಣೆ. ರಥವು ಮೆಲ್ಲನೆ ಮುಂದೆ ಸಾಗುತ್ತಿದ್ದಂತೆ ಸುರು ಮಲೋ ಮೆಣಸು, ಬಾಳೆಹಣ್ಣನ್ನು ರಥಕ್ಕೆ ಎಸೆದು ಭಕ್ತಿಪೂರ್ವಕವಾಗಿ ಕೈಮುಗಿದು ತಮ್ಮ ಊರುಗಳಿಗೆ ಭಕ್ತರು ಹೊರಡುತ್ತಾರೆ. ಆದರೆ ರಥವನ್ನು ಎಳೆದೊಯ್ಯುವ ಸಂದರ್ಭದಲ್ಲಿ ರಥದ ಮೇಲಿನ ಮಾರ್ಗದರ್ಶನ ಸನ್ನೆಗಳನ್ನು ಎಳೆಯುವ ಭಕ್ತಾಧಿಗಳು ಅನುಸರಿಸುತ್ತಾ ಎಳೆಯುತ್ತಾರೆ. ರಥವನ್ನು ನಿಲ್ಲಿಸುವುದಕ್ಕೂ ದಿಕ್ಕನ್ನು ಬದಲಾಯಿಸುವುದಕ್ಕೂ ಕೆಲವು ಸಾಧನಗಳನ್ನು ಬಳಸುತ್ತಾರೆ. ಅವುಗಳನ್ನು ಸನ್ನೆ, ಬಡಿಗೆ, ಹೆದ್ದಾ, ತಡೆಗೊಟ್ಟು ಎಂದು ಕರೆಯುತ್ತಾರೆ. ಯಾರು ಇಲ್ಲಿ ಮಾಂಸ ಭಕ್ಷವನ್ನು ಮಾಡುವುದಿಲ್ಲ ಕಳಸವನ್ನು ಇಳಿಸಿದ ನಂತರ ಮಾಂಸ ಉಪಯೋಗಿಸುವರು. ಎಲ್ಲಾ ವರ್ಗದ ಜನರ ಸರ್ವೋತೋಮುಖ, ಸೌಹಾರ್ಧತೆಯ ಹಬ್ಬವಾಗಿದೆ. ಬಣ್ಣ ಬಣ್ಣದ ಹೊಸ ಉಡುಪುಗಳನ್ನು ಆ ಊರಿನ ಜನರು ಧರಿಸಿಕೊಂಡು ಆನಂದಪಡುತ್ತಾರೆ.

**ಶಿಖರಕ್ಕೆ ಎಣ್ಣೆ ಎರೆಯುವುದು :**

ರಥೋತ್ಸವ ನಡೆದ ಮಾರನೆಯ ದಿನ ಶುದ್ಧಷಷ್ಠಿ. ಆ ದಿನ ಆ ಶಿಖರಕ್ಕೆ ಎಣ್ಣೆಯನ್ನು ಎರೆಯುವ ಪದ್ಧತಿಯಿದೆ. ಲಿಂಗಕ್ಕೆ ತೈಲವನ್ನು ಎರೆಯುವ ಬದಲು ಲಿಂಗದ ಮೇಲೆ ವಿರಾಜಿಸುವ ಶಿಖರಕ್ಕೆ ತೈಲವನ್ನು ಎರೆಯುವುದು ಬಹಳ ಮನೋಹರವೂ, ಆಶ್ಚರ್ಯವೂ ಆಗಿರುತ್ತದೆ. ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿದರೆ ಈ ಶಿಖರ ಬಳಪದ ಕಲ್ಲಿನಿಂದ ನಿರ್ಮಿಸಲ್ಪಟ್ಟಿದೆ. ಬಹುಶಃ ಗಾಳಿ, ಬಿಸಿಲುಗಳಿಗೆ ಬಳಪದ ಕಲ್ಲು ಛಿದ್ರವಾಗಬಾರದು ಎಂದು ಬಿರುಕು ಬಿಡಬಾರದೆಂದೂ ಆಗಿನವರು ತೈಲವನ್ನು ಸವರುತ್ತಾ ಬಂದಿರಬೇಕೆಂದು ಕಾಣುತ್ತದೆ. ಏಕೆಂದರೆ ಸೂರ್ಯನ ಶಾಖವನ್ನು ಹಿರಿದ ತೈಲ ಸೂರ್ಯನ ಬಿಸಿಲು ಪ್ರಖರತೆಗೆ ತಾನೇ ಆವಿಯಾಗಿ ಕಲ್ಲನ್ನು ಶಾಖದಿಂದ ರಕ್ಷಿಸಿವುದು ನಮ್ಮವರ ಭಕ್ತಿ ಪರಕಾಷ್ಟತೆಯಿಂದಾಗಿ ಬಾರೀ ಪ್ರಮಾಣದಲ್ಲಿ ಬರುವ ತೈಲವನ್ನು ಲಿಂಗಕ್ಕೆ ಬದಲು ಶಿಖರಕ್ಕೆರೆದು ಭಕ್ತಿಯ ಪರಮೋತ್ಕೃಷ್ಟತೆಯನ್ನು ತೋರಿಸುತ್ತದೆ. ಇದರಿಂದ ಭಕ್ತರು ಅರ್ಪಿಸಿದ ತೈಲ ಯಾರೊಬ್ಬ ಅನ್ಯ ವ್ಯಕ್ತಿಗಳ ಸ್ವಾರ್ಥಕ್ಕೆ ಬಳಕೆಯಾಗದೇ ಶಿಖರಕ್ಕೆ ಅಥವಾ ದೇವರಿಗೆ ಬಳಸಲ್ಪಡುವುದು.

ಶ್ರೀ ಮರುಳಸಿದ್ಧೇಶ್ವರ ಶಿವಾಚಾರ್ಯರರು ತಮ್ಮ ಶಿಷ್ಯ ಜರಿಮಲೆ ನಾಯಕನ ಶಾಪ ಪರಿಹಾರಾರ್ಥ ಧಡಿಯ ಎಣ್ಣೆ ಶಿಖರಕ್ಕೆ ಅರ್ಪಿಸುವೆಂದು ಹೇಳಿದರ ಪರಿಣಾಮವಾಗಿ ಇಂದಿಗೂ

ಈ ವಂಶಸ್ಥರಿಂದ ಬಂದು ಎಣ್ಣೆಯನ್ನು ಮೊದಲು ಅರ್ಪಿಸಿದ ನಂತರವೇ ಬೇರೆಯವರ ತೈಲವನ್ನು ಎರೆಯಲಾಗುವುದು.

**ಭರತ ಹುಣ್ಣಿಮೆ :**

ಒಂಬತ್ತು ದಿನಗಳ ಕಾಲ ಒಂಬತ್ತು ಪಾದಗಟ್ಟೆಗಳು ಹಾಗೂ ಆರು ಹಳ್ಳಿಗಳಲ್ಲಿ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದ ಹಬ್ಬ ಇಂದು ಎರಡು ದಿನಕ್ಕೆ ಇಳಿದಿದೆ. ಉಜ್ಜಿನಿ ಪರಿಸರದಲ್ಲಿ ರಾಕ್ಷಸನೊಬ್ಬ ತುಂಬಾ ಕಿರುಕುಳ ಕೊಡುತ್ತಿದ್ದನು. ರಾಕ್ಷಸ ಹಾವಳಿ ತಡೆಯುವುದು ಜನತೆಗೆ ಸಾಧ್ಯವಾಗದಿದ್ದ ಸಂದರ್ಭದಲ್ಲಿ ಮರುಳುಸಿದ್ಧೇಶ್ವರನ ಮೊರೆ ಹೋಗುತ್ತಾರೆ. ಸ್ವಾಮಿ ಮೊರೆಯ ಮನ್ನಿಸಿ ಕಾಶಿ ಬಿಗಿದು ರಾಕ್ಷಸನ ನಿಗ್ರಹಕ್ಕೆ ಹೊರಡುತ್ತಾರೆ. ಉಜ್ಜಿನಿಯ ಉತ್ತರ ದಿಕ್ಕಿನಿಂದ ರಾಕ್ಷಸನ ಪತ್ತೆ ಕಾರ್ಯ ಆರಂಭಿಸಿ ಮಾಚೇನಹಳ್ಳಿ ಕೆರೆ, ಅಡವಿ, ಬೆಳದೇರಿ, ನಾಗೇನಹಳ್ಳಿ, ಬೆನಕನಹಳ್ಳಿ, ಕುರುವಿನಕಲ್ಲು, ಗುಡ್ಡ, ಕಾಳಾಪುರ, ನಡುಮಾವಿನಹಳ್ಳಿಗಳೆನ್ನೆಲ್ಲ ಶೋಧಿಸಿ ಕೊನೆಗೆ ನಡುಮಾನಿಹಳ್ಳಿಯ ದಕ್ಷಿಣಕ್ಕೆ ಹಾರಕನಾಳು ಬಳಿ ಇರುವ ಸುದ್ದಿ ತಿಳಿದು ಅಲ್ಲಿಗೆ ಹೋಗಿ ಅವನನ್ನು ಸಂಹರಿಸುತ್ತಾರೆ. ಈ ಸಂಹಾರದ ಸಂದರ್ಭದಲ್ಲಿ ನಡೆದ ಕಾಳಗ ಇಂದಿಗೂ ಕಾಳಗದೋಪಾದಿಯಲ್ಲಿ ಕಡುಬಿನ ಕಾಳಗ ನಡೆಯುತ್ತದೆ. ರಾಕ್ಷಸ (ಹಾರಕನ) ಹಾವಳಿ ಅಂತ್ಯಗೊಂಡಿದ್ದ ಸ್ಥಳವೇ ಇಂದು ಹಾರಕನಾಳು ಆಗಿದೆ. (ಹಾರಕ ಎಂದರೆ ರಾಕ್ಷಸ, ಪ್ರಾಣ ಹಾರಕ)

ದಿಗ್ವಿಜಯದೊಂದಿಗೆ ತನ್ನ ಸ್ವಸ್ಥಳಕ್ಕೆ ಮರುಳುಸಿದ್ಧೇಶ್ವರು ತೆರಳುತ್ತಾರೆ. ರಾಕ್ಷಸನ ಹಾವಳಿಗೆ ಶಪಥಗೈದು ಕಟ್ಟಿದ್ದ ಕಾಶಿಯನ್ನು ಕಾಶಿ ಬಸವಪ್ಪ ಗುಡಿಯಲ್ಲಿ ಬಿಚ್ಚಿ ಊರಿಗೆ ದಿಗ್ವಿಜಯದ ಸುದ್ದಿಯನ್ನು ತಲುಪಿಸುತ್ತಾರೆ. ಸುದ್ದಿ ತಿಳಿಸಿದ ಊರ ಉಸ್ತುವಾರಿ ನಾಯಕ ಬಸಪ್ಪ ಊರ ಬಾಗಿಲಿಗೆ ತನ್ನ ದಂಡಿನ ಸಮೇತ ಬಂದು ಮರುಳುಸಿದ್ಧೇಶ್ವರನಿಗೆ 'ನೀನು ಊರೊಳಗೆ ಬರಬೇಡ, ಹೇಳಿದ ಊರು ಬಿಟ್ಟು ಹೋಗಿದ್ದರಿಂದ ಶ್ರೀಗೌರಿ ದುಃಖಿತಳಾಗಿದ್ದಾಳೆ. ನಿನಗೆ ಕರುಣೆಯೇ ಇಲ್ಲ ಊರೊಳಗೆ ನಾನು ಕರೆದುಕೊಳ್ಳುವುದಿಲ್ಲ' ಎಂದು ವಾದ ಮಾಡುತ್ತಾನೆ. ಬಸಪ್ಪನಿಗೆ 'ರಾಕ್ಷಸರ ಹಾವಳಿ ಹೆಚ್ಚಾಗಿತ್ತು. ಯಾರಿಗೂ ತಿಳಿಸದೆ ತಕ್ಷಣ ಅನಿವಾರ್ಯವಾಗಿ ಹೋಗಬೇಕಾಯಿತು' ಹಾರಕನ ಗೆದ್ದ ಉತ್ಸಾಹದಲ್ಲಿದ್ದ ಸೇವಕರು ಕೈಯಲ್ಲಿದ್ದ ಲೆಕ್ಕಿ ಜುಳ್ಳಿಗಳಿಂದ ಹೊಡೆದು ಕಾಲು ಕುಂಟು ಮಾಡಿ ಊರೊಳಗೆ ಪ್ರವೇಶ ಮಾಡುತ್ತಾರೆ. ಬಸಪ್ಪ ಅಂದಿನಿಂದ ಕುಂಟು ಬಸಪ್ಪನಾಗಿದ್ದಾನೆ.

**ಐತಿಹ್ಯ :**

ಮರುಳುಸಿದ್ಧೇಶ್ವರನು ದನಗಾಹಿಯಾಗಿದ್ದಾಗ ಗೌಡನ ಬಳಿ ಒಂಬತ್ತು ಹೆಜ್ಜೆಗಳ ಜಾಗವನ್ನು ಕೇಳುತ್ತಾನೆ. ಒಂಬತ್ತು ಹೆಜ್ಜೆಗಳ ಜಾಗ ಎಷ್ಟಾದೀತು? ಎಂದು ಭಾವಿಸಿ ಕೊಡಲು ಒಪ್ಪುತ್ತಾನೆ/

ಮೊದಲ ಹೆಜ್ಜೆ ದೇವಸ್ಥಾನದ ಆವರಣದಿಂದ ಆರಂಭವಾಗುತ್ತದೆ. ಊರ ಪಾದಗಟ್ಟೆ ಎರಡನೆಯದಾಗಿ ನಂತರ ಒಂದೊಂದಾಗಿ ಮಾಚೇನಹಳ್ಳಿ ಪಾದ (ಬೆಳದೇರಿ/ನಾಗೇನಹಳ್ಳಿ ಪಾದ), ಬೆನಕನಹಳ್ಳಿ ಪಾದ, ಸೊಕ್ಕೆ ಪಾದ, ಸಾಸ್ವಿಹಳ್ಳಿ ಪಾದ, ಹಾರಕನಾಳು ಪಾದ, ಬುಜಂಗ (ನಡುಮಾವಿನಹಳ್ಳಿ) ಪಾದಗಳಾಗಿ ಸಾಗುತ್ತಾನೆ. ಹೆಜ್ಜೆಗಳನ್ನು ಕಂಡ ಗೌಡ ಮರುಳುಸಿದ್ಧೇಶ್ವರನ್ನು ಹಿಡಿದು ಹೊಡೆಯಲು ಕೋಲು ಹಿಡಿದುಕೊಂಡು ಹಿಂಬಾಲಿಸುತ್ತಾನೆ. ಕೈಗೆ ಸಿಗದೆ ತಪ್ಪಿಸಿಕೊಳ್ಳುವ ಸಿದ್ಧೇಶ ಗರ್ಭಗುಡಿಯಲ್ಲಿದ್ದಾನೆ. ಹುಡುಕುತ್ತಿರುವ ಗೌಡ ಗುಡಿಯ ಬಾಗಿಲಲ್ಲಿಯೇ ಕೋಲು ಹಿಡಿದುಕೊಂಡು ನಿಂತಿದ್ದಾನೆ ಎನ್ನುವ ಕಥೆಯ ಐತಿಹ್ಯ ಜನಪದರಲ್ಲಿದೆ.

**ಅಡಿ ಟಿಪ್ಪಣಿ :**

೧. ಮಠದ ಅಧಿಕಾರಿಗಳಿಂದ ಮತ್ತು ಉಜ್ಜಿನಿಯ ವಕ್ತೃರುಗಳಿಂದ ತಿಳಿಯಲಾಗಿದೆ.

## ಅಧ್ಯಾಯ – ಆರು

# ಉಜ್ಜನಿ ಗ್ರಾಮದ ಮೇಲೆ ಆಧುನಿಕ ಪ್ರಭಾವ

ಗ್ರಾಮ ಸಮಾಜವು ಯಾವಾಗಲೂ ಸ್ಥಿರವಾಗಿರುವುದಿಲ್ಲ. ಅವು ಚಲನೆಯ ಸ್ಥಿತಿಯನ್ನು ಕಾಲಕಾಲಕ್ಕೆ ತಲುಪುತ್ತಲೇ ಇರುತ್ತವೆ. ಒಂದು ಕಾಲದಲ್ಲಿ ಉಂಟಾದ ಗ್ರಾಮದ ಪರಿಕಲ್ಪನೆಯು ಮತ್ತೊಂದು ಕಾಲಕ್ಕೆ ಬದಲಾಗುತ್ತದೆ ಅಂದರೆ ಭೌಗೋಳಿಕ ಅಥವಾ ಭೌತಿಕ ಸ್ಥಿತಿಯಿಂದಲೂ ಸಾಮಾಜಿಕ, ಸಾಂಸ್ಕೃತಿಕ ಮುಂತಾದ ಆಯಾಮಗಳಿಂದಲೂ ಕೂಡ ಗ್ರಾಮ ಸಮಾಜ ಅನೇಕ ಸ್ಥಿತ್ಯಂತರಗಳಿಗೆ ಒಳಗಾಗುತ್ತಲೇ ಇರುತ್ತದೆ. ಪರಂಪರೆಯನ್ನು ಹೊತ್ತುನಿಂತ ಪ್ರಾಚೀನ ಗ್ರಾಮಗಳು ಇಂದು ವಿವಿಧ ಆಧುನಿಕ ಪ್ರೇರಣೆಯಿಂದ ಬದಲಾವಣೆಯ ಹಂತವನ್ನು ತಲುಪುತ್ತಿವೆ. ಇದು ಅನಿವಾರ್ಯ ಕೂಡ ಆಗಿದೆ. ನಗರೀಕರಣವನ್ನು ಅನುಕರಿಸುತ್ತಿರುವ ಇಂದಿನ ಹಳ್ಳಿಗಳು ಹಾಗೂ ಅಲ್ಲಿನ ಸಾಮಾಜಿಕ ಸ್ಥಿತಿಯೂ ಆಧುನಿಕ ಜೀವನ ವಿಧಾನವನ್ನು ಸ್ವೀಕರಿಸುವ ಮೂಲಕ ನವ್ಯತೆಯನ್ನು ಪಡೆಯುತ್ತಿದೆ. ಕೈಗಾರಿಕೆಗಳ ಪ್ರವೇಶದಿಂದಲೂ ಆರ್ಥಿಕ ಸಮಾಜ ಬದಲಾಗುತ್ತದೆ. ನಗರೀಕರಣ, ಕೈಗಾರಿಕರಣದ ಒತ್ತಡದಿಂದ ಕೇವಲ ಗ್ರಾಮಗಳು ಬದಲಾವಣೆಯನ್ನಷ್ಟೇ ಅಲ್ಲ ತೀವ್ರವಾಗಿ ಜರ್ಜರಿತವೂ ಆಗಿದೆ.

ಕೈಗಾರಿಕೆಯನ್ನು ಸ್ಥಾಪಿಸುವ ನೆಪದಲ್ಲಿ ಭೂಕಬಳಿಕೆ, ನಗರಗಳ ಅಗಲೀಕರಣ ಇದರಿಂದ ಹಳ್ಳಿಗಳ ಭೌಗೋಳಿಕ ಪರಿಸರದ ಮಾಲಿನ್ಯ. ಆ ಮೂಲಕ ಜಲನಾಶ, ಜನನಾಶ, ಅನಾರೋಗ್ಯ ಮುಂತಾದ ತೊಂದರೆಗಳೂ ಘಟಿಸಿರುತ್ತಿರುವುದು ಆಧುನಿಕರಣದಿಂದ ಆಗುತ್ತಿರುವ ಮತ್ತೊಂದು ಬಗೆಯ ಪರಿಣಾಮಗಳಾಗಿವೆ.

ಗಾಂಧಿಜಿಯು ಬಯಸಿದ ಭಾರತೀಯ ಸ್ವರಾಜ್ಯದ ಗ್ರಾಮ ಸಮಾಜದಲ್ಲಿ ಗುಡಿ ಕೈಗಾರಿಕೆಯಿಂದಲೇ ಅಭಿವೃದ್ಧಿ ಸಾಧ್ಯವೆಂಬ ಮಾತು ನಿಜವಾಗಿಯೂ ಇಂದು ಅವಶ್ಯಕವೆನಿಸುತ್ತದೆ. ಗುಡಿ ಕೈಗಾರಿಕೆಗಳಿಂದ ಹಳ್ಳಿಗಳ ಗುಣಮಟ್ಟ ಅಭಿವೃದ್ಧಿಯ ಹಂತವನ್ನು ನಿಧಾನ ಗತಿಯಲ್ಲಾದರೂ ತಲುಪುತ್ತವೆ. ಆದರೆ ಗಾಂಧಿಜಿಯವರ ಈ ಪರಕಲ್ಪನೆ ನಾಶವಾಗಿ ಆಧುನಿಕವಾಗಿ ಜಾಗತೀಕರಣದಂತಹ ಕರಾಳ ಆರ್ಥಿಕ, ಸಾಮಾಜಿಕ ಸಂಘರ್ಷಗಳಿಗೆ ಒಳಗಾದ ಇಂದಿನ ಹಳ್ಳಿಗಳು ರಭಸವಾದ (ವೇಗವಾದ) ಕೈಗಾರಿಕೆಯ ಬಹು ರಾಷ್ಟ್ರೀಯ ಕಂಪನಿಗಳ ಬೃಹತ್ ಬಂಡವಾಳ ಹೂಡಿಕೆಯ ಕ್ರಮದಿಂದ ಆರ್ಥಿಕವಾಗಿ ದುರ್ಬಲವಾಗಿರುವ ಭಾರತದಂತಹ ಹಳ್ಳಿಗಳು ಅನೇಕ ಕಷ್ಟಗಳನ್ನು ಎದುರಿಸಬೇಕಾಗಿದೆ. ಅದರಂತೆ ಯಾವ ಕ್ಷೇತ್ರದಲ್ಲಯೂ ಪ್ರಬಲವಾಗಿ ಪೈಪೋಟಿಯನ್ನು ಎದುರಿಸಲಾರವು.

ಉಜ್ಜಿನಿಯೂ ಕೂಡ ಆಧುನಿಕತೆಯ ಪ್ರಭಾವದಿಂದಾಗಿ ಅನೇಕ ಸಾಂಸ್ಕೃತಿಕ ಆಯಾಮಗಳಲ್ಲಿ ಬದಲಾವಣೆಯನ್ನು ಹೊಂದಿದೆ. ಉಜ್ಜಿನಿ ಗ್ರಾಮ ಸಮಾಜದ ಒಟ್ಟು ಆಧುನಿಕ ಸ್ಥಿತ್ಯಂತರವನ್ನು ಈ ಕೆಳಗಿನ ಅಂಶಗಳಲ್ಲಿ ವಿವರಿಸಬಹುದು.

೧. ಸಾಮಾಜಿಕ ಬದಲಾವಣೆ

೨. ಶೈಕ್ಷಣಿಕ ಬದಲಾವಣೆ

೩. ರಾಜಕೀಯ ಬದಲಾವಣೆ

೪. ಆರ್ಥಿಕ ಬದಲಾವಣೆ

೫. ಸಾಂಸ್ಕೃತಿಕ ಬದಲಾವಣೆ

೬. ಭೌತಿಕ ಬದಲಾವಣೆ

೭. ಭಾಷಿಕ ಬದಲಾವಣೆ

**೧. ಸಾಮಾಜಿಕ ಬದಲಾವಣೆ :** ಉಜ್ಜಿನಿ ಗ್ರಾಮವು ಅನೇಕ ಜಾತಿ-ಜನಾಂಗಗಳಿಂದ ಕೂಡಿದ್ದು, ಈ ಹಿಂದೆ ಸಂಪ್ರದಾಯಬದ್ಧ ಜೀವನ ವಿಧಾನವನ್ನು ನಡೆಸುತ್ತಿತ್ತು. ವರ್ಣ ವ್ಯವಸ್ಥೆಯು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದು, ಮೇಲ್ವರ್ಗದವರಿಂದ ಕೆಳವರ್ಗಗಳ ಶೋಷಣೆಯು ಸಾಮಾನ್ಯವಾಗಿಯೇ ನಡೆದಿತ್ತು. ಆದರೆ ಇವತ್ತಿನ ಆಧುನಿಕ ಉಜ್ಜಿನಿಯ ಸಾಮಾಜಿಕ ಜೀವನ ವಿಧಾನವು ಈ ಬಗೆಯ ವರ್ಣ ವ್ಯವಸ್ಥೆಯಂತಹ ಅನಿಷ್ಟ ನಿಯಮದಿಂದ ದೂರ ಉಳಿದಿವೆ ಎಂದು ಹೇಳಬಹುದು. ಜೊತೆಯಲ್ಲಿ ದೇವಾಲಯದಲ್ಲಿ ಕೆಳವರ್ಗದವರಿಗೆ ಪ್ರವೇಶವಿಲ್ಲದಿದ್ದರೂ, ಅನೇಕರು ಇಂದು ಪ್ರವೇಶ ಮಾಡಿದ್ದಾರೆ ಎಂದು ಹೇಳಬಹುದು. ಯಾವುದೇ ರೀತಿಯಲ್ಲಿ ಮೇಲ್ವರ್ಗದ ದಬ್ಬಾಳಿಕೆಯು ನಡೆಯುವುದಿಲ್ಲ. ಜಾತ್ಯಾತೀತ ಸಮಾಜದಲ್ಲಿ ಕಾನೂನಿನ ಅಡಿಯಲ್ಲಿ ಬಹುತೇಕ ಸರಳತೆಯ

ಜೀವನವು ನಡೆಸುವಂತಾಗಿದೆ. ಗೊಡ್ಡು ಸಂಪ್ರದಾಯದಿಂದ ಏಕಮುಖವಾಗಿ ಚಲಿಸುತ್ತಿದ್ದ ಈ ಗ್ರಾಮವು ಅದರಿಂದ ವಿಂಗಡನೆ ಹೊಂದಿ ಸಂಪ್ರದಾಯ ನಿಷ್ಠೆಯಿಂದ ದೂರ ಸರಿಯುವ ಹಂತಕ್ಕೆ ಬಂದಿದೆ. ಪ್ರಾಚೀನ ಸಾಮಾಜಿಕ ಜೀವನದಿಂದ ಆಧುನಿಕತೆಯ ಪ್ರಭಾವ ಸ್ವೀಕರಿಸಿದ ಈ ಗ್ರಾಮ ಅನೇಕ ರೀತಿಯಲ್ಲಿ ಸುಧಾರಿಸಿದೆ. ನಗರೀಕರಣದ ಪ್ರಭಾವದಿಂದ ನಗರದ ಜೀವನ ಶೈಲಿಯನ್ನು ಈ ಗ್ರಾಮ ಕ್ರಮೇಣ ಅನುಸರಿಸುತ್ತಲೇ ಬಂದಿದೆ. ಇದರಿಂದ ನಗರದ ಜೀವನಕ್ರಮ ಇಲ್ಲಿಯೂ ಕಂಡುಬರುತ್ತದೆ.

ಜನರು ವಾಸಿಸುವ ನೆಲೆಗಳು, ಜೋಪಡಿ, ಗುಡಿಸಲುಗಳಿಂದ ಮನೆಯ ಕಡೆಗೆ ಬದಲಾಗುತ್ತಿರುವುದು ಆಧುನಿಕ ಶೈಲಿಯ ಜೀವನ ಮಾದರಿಯನ್ನು ಹೇಳುತ್ತದೆ. ಈ ಗ್ರಾಮ ತೀರ ಹಿಂದುಳಿದ ಹಳ್ಳಿಯಲ್ಲದಿದ್ದರೂ ಗ್ರಾಮೀಣ ಪರಿಸರದ ಎಲ್ಲಾ ರೀತಿ–ನೀತಿಗಳನ್ನು ಪಡೆದುಕೊಂಡಿದೆ. ಇಂದು ಸಾಮಾಜಿಕ ಜೀವನ ಮೇಲ್ಮುಖ ಚಲನೆಯಿಂದ ಸುಧಾರಿಸುತ್ತಿದೆ ಎಂದು ಹೇಳಬಹುದು.

**೨. ಶೈಕ್ಷಣಿಕ ಬದಲಾವಣೆ :** ಒಂದು ಕಾಲದಲ್ಲಿ ಶಿಕ್ಷಣ ಎಂಬುದು ಮೇಲ್ವರ್ಗದವರ ಸೊತ್ತಾಗಿತ್ತು. ಅದರಂತೆ ಈ ಗ್ರಾಮಕ್ಕೂ ಈ ಮಾತು ಅನ್ವಯವಾಗುತ್ತದೆ. ಇಂದು ಇಂಗ್ಲಿಷ್‌ರ ಆಗಮನದಿಂದ ಸ್ವಾತಂತ್ರ್ಯ ನಂತರದಲ್ಲಿ ಶೈಕ್ಷಣಿಕ ವ್ಯವಸ್ಥೆಯು ಬದಲಾಗಿ ಎಲ್ಲರಿಗೂ ಅಕ್ಷರದ ಸ್ವಾತಂತ್ರ್ಯ ದೊರೆಯಿತು. ಶೈಕ್ಷಣಿಕವಾಗಿ ಹಿಂದುಳಿದಿದ್ದರು, ಈ ಗ್ರಾಮವು ಇಂದು ಆಧುನಿಕತೆಯ ಪ್ರಭಾವದಿಂದ ಅನಿವಾರ್ಯವಾಗಿಯಾದರೂ ಜನರು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಅನೇಕ ಸೌಲಭ್ಯಗಳನ್ನು ಸರ್ಕಾರ ಒದಗಿಸಿದೆ. ಆ ಸೌಲಭ್ಯಗಳಿಂದ ಈ ಗ್ರಾಮದ ಶಿಕ್ಷಣಮಟ್ಟ ಹಿಂದಿಗಿಂತ ಬಹಳಷ್ಟು ಸುಧಾರಿಸಿದೆ ಎಂದು ಹೇಳಬಹುದು. ಶಿಕ್ಷಣದಿಂದಾಗಿ ಗ್ರಾಮದ ಎಲ್ಲಾ ವರ್ಗಗಳು ವೈಚಾರಿಕ ನೆಲೆಯಲ್ಲಿ ನಿಂತು ಜೀವನವನ್ನು ಸಾಗಿಸುವಂತಾಗಿದೆ. ಶಿಕ್ಷಣದಿಂದಾಗಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ವಲಯಗಳಲ್ಲಿಯೂ ವಿವಿಧ ರೀತಿಯಲ್ಲಿ ಪಾಲ್ಗೊಂಡು ಆಧುನಿಕತೆಯ ಎಲ್ಲಾ ಸವಾಲುಗಳಿಗೆ ಈ ಗ್ರಾಮ ಹರವಿಕೊಳ್ಳುತ್ತಿದೆ.

**೩. ಆರ್ಥಿಕ ಬದಲಾವಣೆ :** ಉಜ್ಜಿನಿ ಗ್ರಾಮವು ಆರ್ಥಿಕವಾಗಿ ಸಬಲವಾಗಿಯೇ ಭದ್ರತೆಯನ್ನು ಹೊಂದಿದೆ. ಆದರೂ ಅನೇಕ ವೃತ್ತಿಪರ ಜಾತಿ, ವರ್ಗಗಳ ಆರ್ಥಿಕಮಟ್ಟ ಅಷ್ಟಾಗಿ ಅಭಿವೃದ್ಧಿ ಪಡೆದಿಲ್ಲ. ಮೇಲ್ವರ್ಗದವರು ಬಹುತೇಕ ಶಿಕ್ಷಣ ಹೊಂದಿ ಸ್ಥಿತಿವಂತರಾಗಿದ್ದಾರೆ. ಕೆಳವರ್ಗಗಳಲ್ಲಿ ಇದುವರೆಗೆ ಅನಕ್ಷರಸ್ಥ ಆರ್ಥಿಕವಾಗಿ ದುರ್ಬಲವಾಗಿರುವ ಸಮುದಾಯಗಳು ಕಂಡುಬರುತ್ತವೆ. ಈ ಗ್ರಾಮದ ಮುಖ್ಯ ಆರ್ಥಿಕ ಆದಾಯ ಕೃಷಿಯಾಗಿದೆ. ಜೊತೆಗೆ ಕೊರಮ, ಬಡಿಗ, ಕಂಬಾರ ಮುಂತಾದ ವೃತ್ತಿಯನ್ನು ಅವಲಂಬಿಸಿ ಜೀವನ ನಡೆಸುವವರೂ ಇದ್ದಾರೆ. ಇಂದು ಕೈಗಾರಿಕೆಯಿಂದ

ತಯಾರಾಗುವ ಪ್ಲಾಸ್ಟಿಕ್ ಲೋಹದ ವಸ್ತುಗಳು ಇವುಗಳಿಂದ ಈ ವೃತ್ತಿಪರ ಸಮುದಾಯವು ತಯಾರಿಸುವ ವಸ್ತುಗಳಿಗೆ ಬೇಡಿಕೆಯಿಲ್ಲದೇ ಮಾರುಕಟ್ಟೆಯಲ್ಲಿ ಪೈಪೋಟಿಯನ್ನು ಎದುರಿಸದೇ ವೃತ್ತಿಪರ ಗುಡಿ ಕೈಗಾರಿಕೆಗಳು ನಾಶವಾಗುತ್ತಿವೆ. ಇದರಿಂದ ಗ್ರಾಮದಲ್ಲಿ ಅನೇಕ ಸಮುದಾಯಗಳ ಬದುಕು ತೀವ್ರ ಆತಂಕದ ಸ್ಥಿತಿಯಲ್ಲಿ ನಡೆಯುತ್ತಿದೆ.

ಯಂತ್ರಗಳನ್ನು ಉಪಯೋಗಿಸಿ ಗುಡಿ ಕೈಗಾರಿಕೆಗಳನ್ನು ವೃದ್ದಿಸಲು ಇವರಿಗೆ ಸೌಲಭ್ಯಗಳ ಬಂಡವಾಳದ ಕೊರತೆಯಿದೆ. ಆಧುನಿಕತೆಯಿಂದ ಈ ಬಗೆಯ ಸವಾಲುಗಳನ್ನು ಎದುರಿಸಬೇಕಾಗಿದೆ. ಇಲ್ಲಿ ಜಾಗತೀಕರಣದ ಕರಾಳ ನೆರಳೂ ಕೂಡ ಇದೆಯೆಂಬುದನ್ನು ಮರೆಯುವಂತಿಲ್ಲ. ಜಾಗತೀಕರಣದ ವಿರಾಟ್ ಸ್ವರೂಪ ಅಷ್ಟಾಗಿ ಉಜ್ಜನಿಯಂತಹ ಗ್ರಾಮಗಳ ಮೇಲೆ ಪ್ರಭಾವ ಆಗಿಲ್ಲವಾದ್ದರಿಂದ ನಗರದಷ್ಟು ಸವಾಲುಗಳನ್ನು ಹಳ್ಳಿಗಳು ಎದುರಿಸುತ್ತಿಲ್ಲ. ಆದರೂ ಮುಕ್ತ ಮಾರುಕಟ್ಟೆಯಿಂದ ಕೃಷಿ ಉತ್ಪನ್ನಗಳು ಹಾಗೂ ಗುಡಿ ಕೈಗಾರಿಕೋತ್ಪನ್ನಗಳು ನಗರದ ಮಾರುಕಟ್ಟೆಯಲ್ಲಿ ಮಾರಬೇಕಾದರೆ ಇದರಿಂದ ನೇರವಾಗಿ ಜಾಗತೀಕರಣದ ಬೆಲೆಯ ಪ್ರಭಾವ ಇವರ ಮೇಲೆ ತೀವ್ರ ದಾಳಿಯನ್ನು ಆರಂಭಿಸಿದೆ.

ಆಧುನಿಕತೆಯ ಪ್ರಭಾವದಿಂದ ಒಂದು ಕಡೆ ಸಾಮಾಜಿಕ ಜೀವನ ಬದಲಾಗುತ್ತಿದ್ದರೂ ಆರ್ಥಿಕತೆಯಿಂದ ಅದೇ ಮಟ್ಟದಲ್ಲಿ ಕುಸಿಯುತ್ತಿದೆ. ಈ ಎರಡರ ನಡುವೆ ಸಮತೋಲನ ಕಾಪಾಡಿಕೊಳ್ಳುವಲ್ಲಿ ಉಜ್ಜನಿಯಂತಹ ಗ್ರಾಮಗಳು ತಡಕಾಡುತ್ತಿವೆ.

**೪. ರಾಜಕೀಯ ಬದಲಾವಣೆ :** ಉಜ್ಜನಿ ಗ್ರಾಮವು ರಾಜಕೀಯವಾಗಿಯೂ ಮುಂದುವರೆದಿದೆ. ಜಾತ್ಯಾತೀತ ಸಾಮಾಜಿಕ ವ್ಯವಸ್ಥೆಯಲ್ಲಿ ಆಧುನಿಕತೆಯ ಪ್ರಭಾವದಿಂದ ರಾಜಕೀಯ ಅವಕಾಶಗಳನ್ನು ಇಲ್ಲಿನ ಜನತೆಯು ಬಳಸಿಕೊಂಡಿದ್ದಾರೆ. ಮೀಸಲಾತಿಯಂತಹ ಸೌಲಭ್ಯದಿಂದಾಗಿ ಎಲ್ಲಾ ಜಾತಿ-ವರ್ಗದವರೂ ರಾಜಕೀಯ ರಂಗಕ್ಕೆ ಪ್ರವೇಶಿಸಿದ್ದಾರೆ. ಇಬ್ಬರು ಶಾಸಕರಾದ ಕೀರ್ತಿಯೂ ಈ ಗ್ರಾಮಕ್ಕಿದ್ದು, ಈ ಗ್ರಾಮದ ಸರ್ವ ಉನ್ನತಿಗಾಗಿ ಶ್ರಮಿಸಿದ್ದಾರೆ.

**೫. ಸಾಂಸ್ಕೃತಿಕ ಬದಲಾವಣೆ :** ಸಾಂಸ್ಕೃತಿಕ ಆಯಾಮಗಳಲ್ಲಿಯೂ ಆಧುನಿಕತೆ ಪ್ರವೇಶಿಸಿ ಉಜ್ಜನಿ ಗ್ರಾಮ ಅನೇಕ ಸ್ಥಿತ್ಯಂತರಗಳನ್ನು ಕಂಡುಕೊಂಡಿದೆ. ಆಚರಣೆಗಳಲ್ಲಿ, ಹಬ್ಬ-ಹರಿದಿನಗಳಲ್ಲಿ ನಾನಾ ರೀತಿಯ ಬದಲಾವಣೆಗಳು ಇಲ್ಲಿ ಕಂಡುಬರುತ್ತದೆ. ದೇವಾಲಯಗಳ ಜೀರ್ಣೋದ್ಧಾರ ನಿರ್ಮಾಣವು ಕೂಡ ಆಧುನಿಕ ಶೈಲಿಯಲ್ಲಿ ಆಗುತ್ತಿದೆ. ಆಟ-ಪಾಠಗಳಲ್ಲಿಯೂ ಉಜ್ಜನಿ ಗ್ರಾಮದ ಜನತೆಯು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಒಂದು ಕಾಲದ ಪರಂಪರೆಯ ಪ್ರತಿನಿಧಿಯಾಗಿ ಚರಿತ್ರೆಯನ್ನು ಸಾರುವ ಈ ಮಠವು ಆಧುನಿಕೆಯತ್ತ ಮೈಚಾಚಿರುವ ಇಂದಿನ ಸಮಾಜಕ್ಕೂ

ಇವತ್ತಿನ ಅನಿವಾರ್ಯಗಳಿಗೆ ತಕ್ಕ ಹಾಗೆಯೇ (ಧರ್ಮ) ವೈಚಾರಿಕತೆಯನ್ನು ತನ್ಮೂಲಕ ಸಾರುತ್ತಿದೆ. ಕಲೆಯು ಇಲ್ಲಿ ಪ್ರಸಿದ್ಧವಾಗಿದ್ದು, ಸಂಸ್ಕೃತಿಯನ್ನು ಎತ್ತಿ ಹೇಳುತ್ತಿದೆ. ಸರ್ಕಾರದಿಂದ ಒದಗಿ ಬರುವ ಅನೇಕ ಸೌಲಭ್ಯ ಈ ಗ್ರಾಮಕ್ಕೆ ಒದಗಿವೆ. ರಂಗಭೂಮಿಯ ಮೂಲಕ ಗ್ರಾಮದ ಸ್ಥಳೀಯರು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಮೌಖಿಕ ಸಂಪ್ರದಾಯವನ್ನು ಜೊತೆಗೆ ಗ್ರಾಮೀಣ ಪರಿಸರದ ಚರಿತ್ರೆ, ಸಂಸ್ಕೃತಿಯನ್ನು ತಮ್ಮಲ್ಲಿ ಅಡಗಿಸಿಕೊಂಡು ಆ ಮೂಲಕ ಹಾಡುವ ಸ್ತ್ರೀ ಕಲಾವಿದರೂ ಇದ್ದಾರೆ ಮತ್ತು ಮಠದಲ್ಲಿ ಅನೇಕ ಚರಿತ್ರೆಯ ದಾಖಲೆಗಳಿವೆ.

**೬. ಭೌತಿಕ ಬದಲಾವಣೆ :** ಯಾವುದೇ ಗ್ರಾಮ ಒಂದೇ ಸ್ವರೂಪದಲ್ಲಿ ಇರಲಾರದು. ಅದು ತನ್ನ ಭೌತಿಕ ಸ್ವರೂಪದಲ್ಲಿ ಕಾಲಕ್ಕನುಸಾರವಾಗಿ ಬದಲಾಗುತ್ತಾ ಹೋಗುತ್ತದೆ. ಉಜ್ಜಿನಿ ಗ್ರಾಮವೂ ಕೂಡ ಹಿಂದೆ ಸಣ್ಣ ಹಳ್ಳಿಯಾಗಿತ್ತು. ಇಂದು ಅದು ಬೆಳೆಯುತ್ತಾ ಪಟ್ಟಣದ ಸ್ವರೂಪವನ್ನು ಪಡೆಯುತ್ತಿದೆ. ಭೌಗೋಳಿಕ ವಾತಾವರಣ ಅನುಕೂಲವಾಗಿದೆ. ಅರಣ್ಯ, ನೀರು, ಪ್ರಾಣಿ, ಪಕ್ಷಿ ಮುಂತಾದ ಸಂಪತ್ತು ತಕ್ಕಷ್ಟು ಸಮೃದ್ಧಿಯಾಗಿಯೇ ಇವೆ ಸಮುದಾಯಗಳ ವಾಸದ ನೆಲೆಗಳು ಗುಡಿಸಲುಗಳಿಂದ ಕಾಂಕ್ರೀಟ್ ಮನೆಗಳವರೆಗೆ ಬೆಳೆದದ್ದು ತಿಳಿಯುತ್ತದೆ. ವ್ಯವಸ್ಥಿತವಾದಂತಹ ರಸ್ತೆ ಸಾರಿಗೆ ಆರೋಗ್ಯ, ಶಿಕ್ಷಣ ಮುಂತಾದ ಅವಶ್ಯಕತೆಗಳು ದೊರೆಯುತ್ತಿವೆ. ಪ್ರಾಕೃತಿಕವಾಗಿ ಅನುಕೂಲ ಸ್ಥಿತಿಯಲ್ಲಿರುವ ಉಜ್ಜಿನಿ ಗ್ರಾಮವು ಆಧುನಿಕತೆಯಿಂದ ಭೌತಿಕ ಸ್ವರೂಪದಲ್ಲಿ ತನ್ನ ಗಾತ್ರವನ್ನು ಹೆಚ್ಚು ಮಾಡಿಕೊಂಡಿದೆ.

**೭. ಭಾಷಿಕ ಬದಲಾವಣೆ :** ಆಧುನಿಕತೆಯ ಇವತ್ತಿನ ಸಂದರ್ಭದಲ್ಲಿ ಈ ಭಾಷಿಕ ಪ್ರಕ್ರಿಯೆ ಅತಿ ಮಹತ್ವದ ಅಂಶವೆನ್ನಬಹುದು. ಏಕೆಂದರೆ ಸ್ವಾತಂತ್ರ ನಂತರದಲ್ಲಿ ಇಂಗ್ಲೀಷ್ ಭಾಷೆಯ ಪ್ರಭಾವ ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಅತ್ಯಂತ ಪ್ರಭಲವಾಗಿ ಬೇರೂರಿತು. ಇದರಿಂದ ದೇಶಿಯ ಭಾಷೆಗಳಿಗೆ ಅನೇಕ ಕುತ್ತುಗಳು ಬರುತ್ತಿವೆ. ಅನ್ಯ ಭಾಷಿಯ ದಬ್ಬಾಳಿಕೆಯಿಂದ ಕನ್ನಡ ಭಾಷೆ ಸಂಸ್ಕೃತಿಗಳು ಕ್ರಮೇಣ ಮಾಯವಾಗಬಹುದೆಂಬ ಆತಂಕಗಳಲ್ಲಿ ಇಂದು ಭಾಷೆಯ ಮೋಹ ಬೆಳೆಯುತ್ತಿದೆ.

ಉಜ್ಜಿನಿ ಗ್ರಾಮದಲ್ಲಿಯೂ ಇಂಗ್ಲೀಷ್ ಭಾಷೆಯು ಶೈಕ್ಷಣಿಕವಾಗಿ ತನ್ನ ಪ್ರಭಾವವನ್ನು ಬೀರುತ್ತಿದೆ. ಆಡಳಿತದಲ್ಲಿಯೂ ಅದರಂತೆ ಜಾನಪದರ ವ್ಯವಹಾರದಲ್ಲಿಯೂ ಆಂಗ್ಲ ಭಾಷೆಯ ಪ್ರಭಾವ ಆಗುತ್ತಿರುವುದು ಕಂಡುಬರುತ್ತದೆ.

ಹೀಗೆ ಆಧುನಿಕತೆಗೆ ಮೈಯೊಡ್ಡಿರುವ ಇಂದಿನ ಗ್ರಾಮಗಳು ಒಂದು ಕಡೆ ಜಾಗತೀಕರಣ, ಆಂಗ್ಲೀಕರಣ ಮುಂತಾದ ಕರಾಳ ನೆರಳಿನಿಂದ ವಿನಾಶದತ್ತ ಹೊರಳುತ್ತಿರುವುದೂ ತಿಳಿಯುತ್ತಿದೆ.

ಕೈಗಾರಿಕೆ ಮುಂತಾದ ವಿದೇಶಿ ಕಂಪನಿಗಳಿಂದ ಗ್ರಾಮೀಣರ ಕೃಷಿ, ಗುಡಿ ಕೈಗಾರಿಕೆ, ಕಲೆ, ಆರ್ಥಿಕ ಮೂಲಗಳು ನಾಶವಾಗುತ್ತಿವೆ. ಶ್ರಮಿಕರಿಗೆ ಕೆಲಸವಿಲ್ಲದಾಗ ಯಂತ್ರಗಳ ಪ್ರವೇಶವಾಗಿದೆ. ಕಾರ್ಮಿಕರಿಗೆ ಯಂತ್ರದಿಂದ ಕೆಲಸವಿಲ್ಲದೇ ಜೀವನಮಟ್ಟ ಕುಸಿಯುತ್ತಿದೆ. ಉಜ್ಜಿನಿಯಂತಹ ಗ್ರಾಮಗಳಲಿ ಇಂತಹ ಕ್ರಿಯೆಗೆ ಒಳಪಟ್ಟಿದ್ದು, ಅನೇಕ ಏಳು-ಬೀಳನ್ನು ಕಾಣುತ್ತಿವೆ. ಒಟ್ಟಾರೆ ಆಧುನಿಕತೆಯಿಂದ ಗ್ರಾಮೀಣ ಪರಿಸರಕ್ಕೆ ಒಳಿತು, ಕೆಡಕು ಎರಡು ಉಂಟು. ಸಮತೋಲನ ಕಾಪಾಡಿಕೊಂಡಲ್ಲಿ ಇದನ್ನು ಆರೋಗ್ಯಯುತವಾಗಿ ಸ್ವೀಕರಿಸಿ ಅಭಿವೃದ್ಧಿ ಹೊಂದಲು ಸಾಧ್ಯವಿದೆ.

**ಅಡಿ ಟಿಪ್ಪಣಿ :**

೧. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಸಂಶೋಧಿತ ಲೇಖನಗಳು

೨. ಕೂಡ್ಲಿಗಿ ತಾಲೂಕು ದರ್ಶನ

೩. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ

೪. ಮುನ್ನಡೆಯ ಕೂಡ್ಲಿಗಿ

೫. ಕೂಡ್ಲಿಗಿ ತಾಲೂಕಿನ ಪ್ರಾಗೈತಿಹಾಸಿಕ ನೆಲೆಗಳು

೬. ವಕ್ತೃ ವಿವರಣೆ

## ಅಧ್ಯಾಯ – ಏಳು

# ಸಮಾರೋಪ

ಕರ್ನಾಟಕವು ಪುರಾತನ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿದ್ದು, ಪ್ರಾಚೀನ ನಾಡಾಗಿದೆ. ಇಲ್ಲಿರುವ ಅನೇಕ ಪ್ರದೇಶಗಳು ಹಲವಾರು ರಾಜಮನೆತನಗಳ ಆಳ್ವಿಕೆಗೊಳಪಟ್ಟು ಸರ್ವಧರ್ಮಗಳ ಸಮನ್ವಯ ಸಾಧಿಸಿದ ಭೂಮಿಯಾಗಿದೆ. ಇಂತಹ ಹಿನ್ನೆಲೆಯನ್ನು ಪಡೆದ ಒಂದು ಊರು ಕೂಡ್ಲಿಗಿ ತಾಲೂಕಿನ ಉಜ್ಜಿನಿ.

ಉಜ್ಜಿನಿಯ ಗತ ಇತಿಹಾಸ ಮತ್ತು ವೈಭವದ ಸಂಸ್ಕೃತಿಯನ್ನು ತಿಳಿಯುವಲ್ಲಿ ಶಾಸನಗಳು ಮತ್ತು ದೇವಾಲಯಗಳು ಪ್ರಮುಖವಾದ ಆಕಾರಗಳಾಗಿವೆ. ಇವುಗಳ ಕಲೆಗೆ ದೊರೆತ ಪ್ರೋತ್ಸಾಹವನ್ನು, ಕಲಾಶೈಲಿಯನ್ನು ಹಾಗೂ ಧಾರ್ಮಿಕ ಸ್ಥಿತಿಯನ್ನು ತಿಳಿಯುವಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಇದಲ್ಲದೆ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಾರ್ಯಗಳಿಗೆ ಅಂದಿನ ರಾಜರು, ಸಾಮಂತರು, ದಂಡ ನಾಯಕರು, ಪಾಳೆಗಾರರು ಹಾಗೂ ಇತರ ವ್ಯಕ್ತಿಗಳು ನೀಡಿದ ದಾನದ ಮಹತ್ವವನ್ನು ನಾವು ಶಾಸನಗಳ ಮುಖಾಂತರ ತಿಳಿಯಬಹುದಾಗಿದೆ. ಉಜ್ಜಿನಿಯ ಕ್ಷೇತ್ರಕಾರ್ಯವನ್ನು ಕೈಗೊಂಡು ಪ್ರಮುಖವಾಗಿ ದೇವಾಲಯಗಳನ್ನು ಹಾಗೂ ಶಾಸನಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಮೊದಲ ಬಾರಿಗೆ ವಿವರವಾಗಿ ವಿವರಿಸಲಾಗಿದೆ.

ಈವರೆಗೆ ಮಾಡಿರುವ ಒಟ್ಟು ಅಧ್ಯಯನದ ಫಲಿತವನ್ನು ಕುರಿತದ್ದಾಗಿದೆ. ಹಿಂದಿನ ಅಧ್ಯಾಯಗಳಲ್ಲಿ ಸಂಶೋಧಕರು ಕ್ಷೇತ್ರಕಾರ್ಯ ಕೈಗೊಂಡು ವಸ್ತು ನಿಷ್ಠವಾಗಿ ಸಂಶೋಧನೆ ಮಾಡಿದ್ದನ್ನು ಈ ಕೆಳಗಿನಂತೆ ವಿವರಿಸಿದ್ದೇನೆ.

ಪ್ರಸ್ತುತ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದ್ದು,

ಮೊದನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಉಜ್ಜಿನಿ ಪದದ ನಿಷ್ಪತ್ತಿ ಬಗೆಗೆ ಸಂಬಂಧಿಸಿದಂತೆ ಹೇಳಲಾಗಿದೆ.

ಎರಡನೆಯ ಅಧ್ಯಾಯವು ಉಜ್ಜಿನಿ ಗ್ರಾಮದ ಇತಿಹಾಸ ಮತ್ತು ಶಾಸನಗಳು ಎಂಬ ಶೀರ್ಷಿಕೆಯಲ್ಲಿ ಕರ್ನಾಟಕವನ್ನಾಳಿದ ರಾಜಮನೆತನಗಳ ಚರಿತ್ರೆಯನ್ನು ವಿವರಿಸಿ ಉಜ್ಜಿನಿ ಮರುಳುಸಿದ್ಧೇಶ್ವರ ದೇವಾಲಯದ ಶಾಸನಗಳ ವಿವರಣೆಯನ್ನು ಉಲ್ಲೇಖಿಸಲಾಗಿದೆ.

ಮೂರನೆಯ ಅಧ್ಯಾಯವು ಉಜ್ಜಿನಿ ಗ್ರಾಮದ ಐತಿಹ್ಯಗಳು ಎಂಬ ಶೀರ್ಷಿಕೆ ಪುರಾಣ–ಐತಿಹ್ಯಗಳಾದ ಕಥೆ, ಲಾವಣಿಗಳು, ಗಾದೆ, ಒಗಟುಗಳು, ನಂಬಿಕೆಗಳ ಬಗ್ಗೆ ವಿವರಿಸಲಾಗಿದೆ. ಮತ್ತು ದೇವಾಲಯದ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಉಲ್ಲೇಖಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಉಜ್ಜಿನಿಯ ಗ್ರಾಮೀಣ ಬದುಕು ಎಂಬ ಶೀರ್ಷಿಕೆಯ ಮುಖಾಂತರ ಉಜ್ಜಿನಿ ಗ್ರಾಮದ ಸಾಮಾಜಿಕ ವ್ಯವಸ್ಥೆ, ಧಾರ್ಮಿಕತೆ, ಆರ್ಥಿಕ ಬದುಕು ಮತ್ತು ಇಂದಿನ ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಉಜ್ಜಿನಿ ಗ್ರಾಮದ ಸಂಸ್ಕೃತಿ ಎಂಬ ಶೀರ್ಷಿಕೆಯಿಂದ ಉಜ್ಜಿನಿ ರೂಢಿ–ಪದ್ಧತಿಗಳು, ಹಬ್ಬ–ಹರಿದಿನಗಳ ಬಗ್ಗೆ ವಿವರಿಸಿದ್ದು, ಮತ್ತು ಮರುಳುಸಿದ್ಧೇಶ್ವರ ರಥೋತ್ಸವ ಮತ್ತು ಜಾತ್ರೆಯ ಬಗ್ಗೆ ತಿಳಿಯಲಾಗಿದೆ.

ಆರನೆಯ ಅಧ್ಯಾಯದಲ್ಲಿ ಉಜ್ಜಿನಿ ಗ್ರಾಮದ ಮೇಲೆ ಆಧುನಿಕತೆಯ ಪ್ರಭಾವ ಎಂಬ ಶೀರ್ಷಿಕೆಯಲ್ಲಿ ಸಾಮಾಜಿಕತೆಯಲ್ಲಿ ಆದಂತ ಆಧುನಿಕ ಬದಲಾವಣೆಗಳು, ಶೈಕ್ಷಣಿಕ ಬದಲಾವಣೆ, ರಾಜಕೀಯ ಬದಲಾವಣೆ, ಆರ್ಥಿಕ ಬದಲಾವಣೆ, ಸಾಂಸ್ಕೃತಿಕ ಬದಲಾವಣೆ, ಭೌತಿಕ ಬದಲಾವಣೆ ಮತ್ತು ಭಾಷಿಕ ಬದಲಾವಣೆ ಬಗ್ಗೆ ಚರ್ಚಿಸಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಸಮಾರೋಪದಲ್ಲಿ ಫಲಿತಗಳು, ಅನುಬಂಧದಲ್ಲಿ ಶಾಸನಗಳ ಪಠ್ಯಯನ್ನು ಮತ್ತು ಮರುಳುಸಿದ್ಧನ ಹಾಡುಗಳಿದ್ದು, ನಕ್ಷೆಗಳು ಮತ್ತು ಛಾಯಾಚಿತ್ರಗಳು ಕೊಡಲಾಗಿದೆ.

ಶಾಸನಗಳು ಮತ್ತು ದೇವಾಲಯದಂತೆ ಇಲ್ಲಿನ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸ್ಥಿತಿ–ಗತಿ ಪ್ರಗತಿಯ ಬಗೆಗೆ ಶಾಸನಗಳ ದೇವಾಲಯದ ಆಚರಣೆಗಳು ತಿಳಿಸುತ್ತವೆ.

ಆಯಾ ಕಾಲಗಳಲ್ಲಿ ಆಳ್ವಿಕೆ ಮಾಡಿದ ಅರಸರು, ಪಾಳೆಗಾರರು ದಾನ-ದತ್ತಿಗಳನ್ನು ಕೊಡುವುದರ ಮೂಲಕ ಗುಡಿ-ಗುಂಡಾಂತರಗಳ ಜೀರ್ಣೋದ್ಧಾರ ಮಾಡುವುದರ ಮೂಲಕ ಉಜ್ಜನಿಯ ಸಾಂಸ್ಕೃತಿಕ ವೈಭವವನ್ನು ಹೇಗೆ ಹೆಚ್ಚಿಸಿದರೆಂಬುವುದನ್ನು ಇಲ್ಲಿ ನಿರೂಪಿಸಿದೆ.

ಪ್ರಬಂಧದ ಪ್ರಮುಖ ಸಾರವೆಂದರೆ ಉಜ್ಜನಿಯ ಪ್ರಾಚೀನ ಗತವೈಭವದ ಬದುಕಿನ ಮೇಲೆ ಶಾಸನಗಳು ಮತ್ತು ಇಂದಿನ ಆಚರಣೆಗಳು ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವುದಾಗಿದೆ. ಪ್ರಸ್ತುತ ಅಧ್ಯಯನದ ಇತಿಮಿತಿಗಳಲ್ಲಿ ಆಕರಗಳನ್ನು ಸಂಗ್ರಹಿಸಿ ವಿಷಯವನ್ನು ವಿಶ್ಲೇಷಿಸಿ, ಸಂಯೋಜಿಸಲಾಗಿದೆ. ಇತಿಹಾಸಕ್ಕೆ ಪೂರಕವಾದ ಕೆಲವು ವಿವರಣೆಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

# ಅನುಬಂಧಗಳು

* ಶಾಸನದ ಪಠ್ಯಗಳು
* ಮರುಳುಸಿದ್ಧನ ಹಾಡು
* ನಕ್ಷೆಗಳು
* ಛಾಯಾಚಿತ್ರಗಳು

## ಅನುಬಂಧಗಳು

**ಉಜ್ಜಿನಿಯ ಶಾಸನಗಳು :**

**೧. ಸಿದ್ದೇಶ್ವರ ದೇವಾಲಯದ ಗರ್ಭಗೃಹದ ಗೋಡೆಯ ಪಕ್ಕದಲ್ಲಿರುವ ಶಾಸನ :**

ಶಾಲಿವಾಹನ ಶಕವರ್ಷ ೧೪೬೧ನೆಯ ವಿಕೃತ ಸಂವತ್ಸರದ ಭಾದ್ರಪದ ಶುದ್ಧ ೧೨ ಮಂಗಳವಾರಕ್ಕೆ ಸರಿಯಾದ ಕ್ರಿ.ಶ. ೨೬-೦೮.೧೫೩೬ರ ಮಂಗಳವಾದಂದು ಅಚುತದೇವ ಮಹಾರಾಯನು ಆನಂದನಿಧಿ ದಾನವನ್ನು ಮಾಡಿದ.

೧. ನಮಸ್ತುಂಗಶಿರಶ್ಚುಂಬಿದಂ(ದ್ರಚಾ) ಮರಚಾರವೇ ತ್ರೈ

೨. ಲೋಕ್ಯನಗರಾರಂಭ(ಮೂಲ) ಸ್ತಂಭಾಯ

೩. ಶಂಭವೇ(॥ *) ಸ್ವಸ್ತಿ ಶ್ರೀಜಯಾಭ್ಯು(ದಯ)ಶಾಲಿವಾಹನಶ

೪. ಕವರುಶ ೧೪೬೧ನೆಯ ವಿಕೃ...ರದ ಭಾದ್ರಪಶು

೫. ದ್ಧ ೧೨ ಮಂಗಳವಾರದಲು ಶ್ರೀಮ...ರಾಜಾಧಿರಾಜ ರಾ(ಜ)

೬. ಪರಮೇಶ್ವರ ಶ್ರೀಅಚ್ಯುತರಾಯಮಹಾ(ರಾಯ)ರು ಮಾಡಿದ ದಾನದ ಶ್ಲೋಕ

೭. ಶಾಕೇ ಚಂದ್ರ ರಸಾಮರೇಂದ್ರಗಣತೇ...ಪಕ್ಷೇ ಭಾದ್ರಪದಸ್ಯಪ್ರೋಷಿಚವಿಧೌ

೮. ದ್ವಾದಶ್ಯಭಿಖ್ಯೇತಿಥೌವಾರ ಭೂಮಿಸುತಸ್ಯ (ವಿಷ್ಣ್ವಧಿಪತೌ) ತಾರೇಚ್ಯುತಕ್ಷಾ ಪತಿಃಕೃತ್ವಾನಂದ

೯. ನಿಧಿಂ ದ್ವಿಜಾ(ಂ)ನ್ಧನದಯಂಟಫಿಮೋದ(ಯನ್ನಾ)ಧವಂ ॥ ।

೧೦. ಪಾಲಿತಸ್ಯ ಪರಿತೋಭೂತಾಳಿಸಂವೇಷ್ಟಿತಾಃ(ಸರ್ವೆಜ್ಞೈಸ್ಸ್ವವಶೀಕೃತ)ಸ್ಯ ಸತತಾಕ್ರಾಂತಾ ಭು।

೧೧. ಜಂಗಾವ್ರ ಕೈಃಪ್ರಾಪ್ತಸ್ಯಾಭಿನವಪ್ರಶಸ್ತಿಮಧಿಕಪ್ರಖ್ಯಾತಶ ಉರ್ಯಾಚ್ಯು

೧೨. (ತಕ್ಷ್ಮಾ) ಪಾನಂದನಿಧೇರ್ನವಾಪಿ ನಿಧಯಃಕಿ ತೇ ಲಮಭತೇ ತುಲಾಂ (೧೧೨+)

**೨. ಗ್ರಾಮದ ಸಿದ್ಧಲಿಂಗೇಶ್ವರ ದೇವಾಲಯದ ಗರ್ಭಗೃಹದ ಮುಂಭಾಗದ ಸಭಾಂಗಣದಲ್ಲಿರುವ ಶಾಸನ :**

ಯಾದವ ವೀರಮಹಾದೇವರಾಯನ ಆಳ್ವಿಕೆಯ ಒಂಬತ್ತನೆಯ, ವಿಭವ ಕಾರ್ತಿಕ ಬಹುಳ ಅಮಾವಾಸ್ಯೆ, ಸೋಮವಾರ, ಸೂರ್ಯಗ್ರಹಣಕ್ಕೆ ಸರಿಯಾದ ಕ್ರಿ.ಶ. ೬-೧೧-೧೨೬೮ರ ಮಂಗಳವಾರ (ಸೋಮವಾರವಲ್ಲ) ಸೂರ್ಯಗ್ರಹಣದಂದು ಬೋಗಯನು ಉಜ್ಜಯನಿಯ ಮಲ್ಲಿಕಾರ್ಜುನ ದೇವರಿಗೆ ಸುಂಕವನ್ನು ಮಾನ್ಯವಾಗಿ ಬಿಡುತ್ತಾನೆ.

೧. ಸ್ವಸ್ತಿಶ್ರೀಮತು ಯಾದವನಾರಾಯಣಂ ಭುಜಬಳಪ್ರೌಢಪ್ರತಾಪಚಕ್ರವರ್ತಿ

೨. ವೀರಮಹಾದೇವರಾಯ ವಿಜಯರಾಜ್ಯೋದಯ

೩. ಒಂಭತ್ತನೆಯ ವಿಭವಸಂವಛ್ಚರದ ಕಾರ್ತೀಕ ಬಹುಳ

೪. ಅಮವಾಸಿಸೋಮವಾರಸೊರಿಯ ಗ್ರಹಣದಲುಸ್ವಸ್ತಿಶ್ರೀ

೫. ಮನ್ಮಹಾಪ್ರಧಾನಂ ಸಾರ್ವಾಧಿಕಾರಿ ತಿಪ್ಪರಸರ ಅಳಿ

೬. ಯಚೌವುಸರಸರು ಪಾಂಡ್ಯನಾಡ ಸಾರ್ವ್ವಾದಿಕಾರಿಮಂ

೭. ಮಾಡುತ್ತಿರ್ದ್ದಲ್ಲಿ ಅವರ ಕಯಲು ಪಡಿಕೆಣಿಯಾಇ ಸುಂಕಾಧಿಕಾರವಂ

೮. ರಮಂಮಾಡುತ್ತಿರ್ಲುಬೆಗಡ ಸುಂಕದ ಚವುಂಡರ್ಸವು

೯. ಜ್ಜನಿಯಸೇನಬೋವ ಗೋವಿಂದರ್ಸನ ಮಗ ಸುಂಕದ ಬೋಗಯನು

೧೦. ಅಳಿಯ ಚೌವುಡರ್ಸರ ನಿರೂಪದಿಂ ಉಜ್ಜಿನಿಯ ಶ್ರೀ ಮಲ್ಲಿಕಾರ್ಜ್ಜುನ

೧೧. ದೇವರಶ್ರೀಕಾರ್ಯ್ಯಕ್ಕೆ ಬಿಟ್ಟುಧರ್ಮಪುರದ ಗುಡುದಳು ಕಗರಗೋಪಾಯ್ಯ

೧೨. ಯನಬೈರವಹಾರವೆಂತಂದಡೆವಿನಾನ್ಯ ಸುಂಕ ಶ್ರೀಮಾಂನ್ಯದೇವರಿಗೆ

೧೩. ದಡಂಧಾರ ಮಹಾಗಣಂಗಳು ನಡೆಸುವರು॥ ಸ್ವದತ್ತಂಪರದತ್ತವ್ವ

೧೪. ಯ್ವಹರೇವಸುಂಧರಾಂಷಷ್ಟಿವ್ವರ್ಷಸಹಸ್ರಾಣಿಯಿಷ್ಟಾಯಾಂ

೧೫. ಜಾಯತೇಕ್ರಿಮಿಃ॥

**೩. ಸಿದ್ಧೇಶ್ವರ ದೇವಾಲಯದ ಪೌಳಿಯಲ್ಲಿರುವ ಶಾಸನ :**

೧೨ನೆಯ ಶತಮಾನದ ಈ ಶಾಸನದಲ್ಲಿ ಜಗದ್ದಳ ಪಾಂಡ್ಯದೇವನ ಪ್ರಶಸ್ತಿಯಿದೆ. ಜಗದ್ದಳ ಪಾಂಡ್ಯನು ಕಲದೇವರಿಗೆ ಕೋಗಳಿಯಲ್ಲಿ ೪೦೦ ಕಮ್ಮ ಭೂಮಿಯನ್ನು ದಾನ ನೀಡುತ್ತಾನೆ.

೧. ನಮಸ್ತುಂಗ ಶಿರಶ್ಚುಂಬಿ ಚಂದ್ರಾಚಾಮರ ಚಾರಮೇತ್ರ್ಯಲೋಕ್ಯ ನಗರಾಂಭ ಮೂಲಸ್ತಂಭಾಯ ಶಂಭವೇ॥

ತೊಳಪೆಳರೆ ಕೆಂಜಡೆಯೊಳ್ಪಳಚ್ಚನರಲಲ್ಲಿ ಬೀಳಿಸೆ ಗಂಗಾನದಿ ಕಣಗೋರ್ಳಿಸುವ ಕಲಿದೇವೇಶಂ ಸಲೆ ಜಗ

೨. ದಳಪಾಂಡ್ಯ ನೃಪಗೀಗಭಮತಮಂ ॥ಆ ಅಂಬುಜಸಂಭವಂ ಪಡೆದು ಪುಟ್ಟಿದ ಕೃಷ್ಣನಾ ನಾಚಿಪಪನ್ತೆಂತಂಬುದು ಚಂದ್ರ...ಭ

೩. ವೋಜ್ವಳ ಪಯೋನಿಧಾನದಂತೆಂಬುದು ಮೆಚ್ಚಿಮೆಚ್ಚಿಪ(ರಿ)ಭಾವಿಸಿ ಭಾವಿಸಿ ಕೂರ್ತುದಾತ್ರಿ ಕಾದಂಬ ಕುಲೋದ್ಭವಾಗ್ರಣಿ ಜಗ

೪. ದ್ದಳ ಪಾಂಡ್ಯ ನೃಪಾಳದೇಶವಂ॥ಆ ಭುವನವಿನುತ ಕುಲದೊಳು ಭೂಭುವನವನೊಂದೆ ತೋಳೋಳರ್ಬ್ಯನೆ ಬಕಿಯೂ

೫. ರನಾದಂತೆ ತಳೆದಂ ಭೂಬೃತ್ಕುಳತಿಳಕನೆನಿಪ ಜಗರಳಪಾಂಡ್ಯ ॥ ಎಳೆಯೊಳ್ವಿ ಖ್ಯಾತಿವೆತ್ತಂಪೊಳೆಯೊಳಕ್ಕರಿಥಾಬ್ಯಬದಾಶ್ಚ ಜ.ದೊ.

೬. ಳೆಶ್ರೀಕಲಿದೇವಗೀತನಾನಂದದೆ ಜಗದಳ ಪಾಂಡ್ಯೋರ್ವ್ವಿಪಂ ಗಟ್ಟಿಯುರ ಕೋಗಳಿಯಾಳ್ವಾಲುನೂರುಂ ಕಂಬಸ್ಥಳವನ.ಕಾಡಂ ಚೋವಂ ವಂಶಾಗ್ರಾ

೭. ಗಣ್ಯನೋನು॥ಚಂದ್ರಾರ್ಕ್ಕುರುಳ್ಳಂನ್ನೆವ್ ವಲೆಬಳ್ಳಿಂ ಭಾಗ್ಯವತಂ ಮಹತ್ತಂ ನಳನಹುಷಸಗರಖೇಚರ ದಿಳೀಪವಮುರ

೮. ಕಾರ್ತ್ಯವೀರ್ಯ್ಯಾರ್ಜ್ಜುನರೊಂದಳವುಳ್ಳಾರ್ಫ್ಹಾಎಗದಳಪಾಂಡ್ಯ ನೃಪಾಳನೆಂಬುದವನಿಚಕ್ರಂ (ಉಳಿದ ಭಾಗ ಗೋಡೆಯಲ್ಲಿ ಸೇರಿದೆ)

**೪. ಅದೇ ದೇವಾಲಯದ ಬಲ ಕಂಬದ ಮೇಲಿರುವ ಶಾಸನ :**

ತ್ರುಟಿತ ಯಾದವ ಅರಸು ಮಹಾದೇವನ ೧೦ನೆಯ ವರ್ಷದ...ಜೇಷ್ಠ ಬ.೧೦ ಸೋಮವಾರದಂದು ಮಲ್ಲಿನಾಥದೇವರ ನಂದಾವೀಗೆಗೆ ದಾನ ನೀಡಿದ ಉಲ್ಲೇಖವಿದೆ. ಶಾಸನದಲ್ಲಿ ಸರ್ವಾಧಿಕಾರಿ ತಿಪ್ಪರಸ, ಬರ್ಮರಸ, ಚವುಡರ್ಸರ ಉಲ್ಲೇಖವಿದೆ.

೧. ...ಸ್ತುಂಗ ಶಿಶ್ಚುಂಬಿ ಚಂದ್ರ ಚಾಮರಚಾರವೇ..

೨. ...ರಾರಂಭಃ ಮೂಲಸ್ತಂಭಾಯ ಸಂಭವೇ॥ಸ್ವಸ್ತಿ

೩. ...ತುಯಾದವನಾರಾಯಣಂ ಭುಜಬಳಪ್ರವುಡ ಪ್ರ

೪. ...ವರ್ತ್ತಿ ಶ್ರೀ.ಮಹಾದೇವ ವಿಜಯರಾಜ್ಯೋದಯದ ೧೦ನೆಯ

೫. ...ರದ ಜೇಷ್ಟ ಬ ೧೦ ಸೋಮವಾರದಂದು ಶ್ರೀಮನು

೬. ...ಪ...ಸರ್ವ್ವಾಧಿಕಾರಿ ತಿಪ್ಪರ್ಸರಳಿಯ ಚವುಡರ್ಸರ ನಿರೂಪದಿಂ ಸೀಮ

೭. ...ಸಂ...ರ್ಸರರಮಗ ಬಂಮರ್ಸರಾ ಪಾಂಡ್ಯ ನಾಡ ಸುಂ...ನೋಡು

೮. ...ಶ್ರೀಮಲ್ಲಿನಾಥದೇವರ ನಂದಾದೀವಿಗೆಗೆ ಬಿಟ್ಟ ಧರ್ಮ್ಮ...ಮ್ಮ

೯. ...ಲ್ಯ ಯ ಹೇರಿಂಗೆರೆಗ ಒಂದು ವಿತೆ ಎಮೆಗೆಂದು...

೧೦. ...ಯಿದ...ವಾನುಸ್ಥಳದ ಗೌಡುಗಳು ಮಹಗ

೧೧. ...೧.

**೫. ಅದೇ ದೇವಾಲಯದಲ್ಲಿರುವ ಗಂಟೆಯ ಮೇಲಿರುವ ಶಾಸನ :**

ಶಾಲಿವಾಹನ ಶಕವರ್ಷ ೧೬೩೪ನೆಯ ನಂದನ, ಶ್ರಾವಣ, ಶು.೫ರಂದು ಅಂದರೆ ಕ್ರಿಸ.೨೭-೦೭.೧೭೧೨ರ ಭಾನುವಾರದಂದು ಬಾಗುಳಿಯ ಯಿಂಮಡಿಬಸವನ ಮಗ ಮುಂಮುಡಿಬಸವಂಕ್ತರಾಯ ಇವನ ಮಗ ಮುಂಮಡಿಬಸವಪ್ಪ ನಾಯಕರು ಉಜಿನಿ ಸಿದ್ಧೇಶ್ವರದೇವರ ಪಾದಕ್ಕೆ ಈ ಗಂಟೆಯನ್ನು ಸಮರ್ಪಿಸಿರುತ್ತಾರೆ.

೧. ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೬೩೪ನೇ ನಂದನ ಸಂವತ್ಸರದ ಶ್ರಾವಣ ಶುದ್ಧ ೫ಲು ಶ್ರೀಸ್ವಾಮಿ ಉಜಿನಿ ಸಿದ್ಧೇಶ್ವರ ದೇವರ ಪಾದಕ್ಕೆ ದೇವರಭಕ್ತರು ಬಾಗುಳಿ ಯಿಮ್ಮಡಿಬಸವಂಯಿರಾಯರ ಮುಮಾರ ಮು.

೨. ಂಡಿ ಬಸವಂಕ್ತರಾಯರ ಕೊಮಾರ ಮುಂಮಡಿ ಬಸವಪ್ಪನಾಯಕರವರು ಮಾಡಿಸಿ ದೇವರ ವರಸನ್ನಿಧಾನದಲ್ಲಿ ಸಮರ್ಪಿಸ್ತಂಗಂಟೆ

ಕ್ರಿಶ. ೧೨೬೮ ಈ ಶಾಸನದ ಪ್ರಕಾರ ಉಜ್ಜಿನಿ ಶ್ರೀಮರುಳಸಿದ್ಧೇಶ್ವರ ದೇವರ ಪೂರ್ವದ ಹೆಸರು 'ಮಲ್ಲಿಕಾರ್ಜುನ' ಎಂದು.

**೬. ಶ್ರೀ ಮರುಳಸಿದ್ಧ ದೇವಾಲಯದ ಪಶ್ಚಿಮ ಮುಖ ಮಂಟಪದ ಕಟ್ಟೆಯ ಮೇಲಿರುವ ಶಾಸನ**

೧. ಶ್ರೀ ಶುಭಮಸ್ತು ನಮಸ್ತುಂಗ ಶಿರಚ್ಚುಂಭಿ ಚಂದ್ರಚಾಮ

೨. ರಚಾರವೇ ತ್ರೈಲೋಕ್ಯನಗರಾಂಭಮೂಲಸ್ಥಂಭಾಯಶಂಭವೇ

೩. ಸ್ವಸ್ತಿಶ್ರೀ ವಜಯಾಭ್ಯುದಯ ಶಾಲಿವಾನ ಶಕ ವರುಶ ೧೪೮೫ನೇ

೪. ಯದುಂದುಭಿ ಸಂವತ್ಸರ ಮಾಘ ಶುದ್ಧ ೧೦ನೆಯ ಸೋಮವಾರ ಪುಂಣ್ಯಾಂ

೫. ಕಾಲದಲು ಶ್ರೀನ್ಮಹಾ ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ

೬. ವೀರಸದಾಶಿವ ಮಹಾದೇವರಾಯರು ವಿದ್ಯಾರಂಣ್ಯಗಳ ಪ್ರತಿನಾಮವಾದ ವಿದ್ಯಾ-

೭. ನಗರಿಯ ರತ್ನ ಸಿಂಹಾಸನದಲ್ಲಿ ಸುಖಸತ್ಕಥಾ ವಿನೋದದಿಂ ಪೃಥ್ವಿರಾಜಂಗೆ ಇರುತ್ತ

೮. ವಿರ್ದು ಹಡಪದ ಬಯಪ್ಪ ನಾಯಕ ಅಯನ ಕೊವರ ಕೃಷ್ಣಪ್ಪ ನಾಯಕ ಆ-

೯. ಯಮವರಿಗೆ ಪಾಲಿಸಿದ ರಾಯ ರಾಜಧಾನಿಯಾದ ಕೋಗಳೆಯ ಸೀಮೆಯ ಕಸಲು-

೧೦. ವಕೊಟ್ಟೂರ ಸೀಮೆಯೊಳಗಣ್ಣ ಉಜ್ಜಯಿನಿ ಮಲ್ಲಿಕಾರ್ಜುನ ಲಿಂಗನ ಪೂರ್ವತಾಂ-

೧೧. ಬ್ರಶಾಸನಸ್ಥವಾದ ಭೂಮಿವೊಳಗೆ ಸಹಾರಾಜರು ಹಾಕಿದ ನಾಗೇನಹಳ್ಳಿಯ ನೂಪೂ

೧೨. ರ್ವದಸಾ ವಿಚಾರಿಸಿ ಜೇರ್ಣೋದ್ಧಾರವ ಮಾಡಿ ನಾಗೇನಹಳ್ಳಿಯೆಂಬ ಗ್ರಾಮಕ್ಕೆಪ್ರ-

೧೩. ತಿ ನಾಮಧೇಯವಾದ ಮಾರ್ಗ ಸಹಾಯ ಊರವನು ಕಟ್ಟಿಸಿ ಪ್ರತಿಷ್ಠೆಯಂ-

೧೪. ಮಾಡಿ ನಂಮ ಕೃಷ್ಣಪ್ಪ ನಾಯಕ ಆಯನವರಿಗೆ ಆಯುರಾರೋ

೧೫. ಗ್ಯ ಧರ್ಮಸಹಿತ ಧರ್ಮ ಕೀರ್ತಿಪುಣ್ಯಂವಾಗಬೇಕೆಂದು ಗಂಡರ ಗಂ ಪ್ರಜೆ-

೧೬. ಮೆಚ್ಚುಗಂಡ ಪಂಡಿತ ಪುಂಡರೀಕ ಚಂಡಮಾತಾಂಡಗವೆ-

೧೭. ಲೂರ ಕಾಳಯನಾಯ್ಕನರ ಕುಮಾರ ಮಾರ್ಗ ಸಹಾಯನಾಯಕ-

೧೮. ರೂ ಶ್ರೀಮನ್ಮಹಾದೇವರ ದೇವದೇವ ಶಿಖಾಮಣಿ ಶ್ರೀ ಉಜನಿ-

೧೯. ಮಲ್ಲಿಕಾರ್ಜುನ ದೇವರ ಮೂರನೆಯ ಜಾದವ ಅವಸರದ

೨೦. ಅಮೃತಪಡಿ-ನಯವೇಧ್ಯಕ್ಕೇತ್ರಿವಾಚವೂಸಮರ್ಪಿಸಿದ

೨೧. ರು (*) ಮಾರ್ಗ ಸಹಾಯ ಪುರುದ ಚತುಸೀವೊಳಗಾದನಿಧಿನಿ-

೨೨. ಕ್ಷೇಪಜಲಪಾಷಾಣ ಯಕ್ಷಿಣಿ ಆಗಮಿಸಿದಸಾಂಧುಂಗಳ ಉ

೨೩. ಅಷ್ಟಭೋಗತೇಜಸಾಂಯಂಗಳನು ಆಗುಮಾಡಿಕೊಂಡು ಅನುಭವಿ-

೨೪. ಸುವಮಾಯಂಗುಕೊಟ್ಟಧರ್ಮ ಶಿಲಾಶಾಸನ॥ ದಾನಪಾಲನಯೋ-

೨೫. ರ್ಮಧ್ಯದಾನಾಶ್ರೆ ಯೋನುಪಾಲನಂ ದಾನಟ್ಸರ್ಗವಪ್ನೋತಿ ಪಾಲನಾ-

೨೬. ಅಚ್ಯತಪದಂಸ್ವದತಾಂದ್ವಿಗುಣಂಪುಣ್ಯಪರದತ್ತಾನತಾ

೨೭. ಲನಂಪರದತ್ತಾಪಹಾರೇಣಸ್ವದತ್ತಂನಿತ್ಫಲಂಭವೇಸ್ವದತ್ತಂಪರ

೨೮. ದತ್ತಂವಾಯೋಹರೇತಿ ವಸುಂಧರಾ ಷಷ್ಟಿರ್ವ್ಯರುಷ ಸಹಪ್ರಾಣಿವಿಷ್ಠಾ

೨೯. ಯಾಂಜಾಯತೆಕ್ರಿಮಿ; ಮಂಗಳಮಹಾಶ್ರೀ ಶ್ರೀ ಶ್ರೀ॥

೩೦. ಯೀಧರ್ಮಕ್ಕೆವದೊದಲಿರುವ...ತಾಯನುವಾರಣಾಸಿಯ

೩೧. ಲ್ಲಿಕೊಂದಪಾತಕ್ಕೆ ಹೋಹರು

೭. **ಶ್ರೀ ಉಜ್ಜಯನಿ ಶ್ರೀ ಪೀಠದ ಮುಂದಿನ ಶಾಸನ :**

೧. ೯-೧೧-೬೧ರಿಂದ ೧೯-೨-೬೨

೨. ಅಷ್ಟಗ್ರಹಕೂಟದ ಮಾಹಾಶಾಂತಿ

೩. ಕಾರ್ಯಕ್ರಮ

೧೨ ೧ ೨೩

೧೧ ಶಾಲಿವಾಹನ ಶಕ ೧೮೮೩ ರಾಹು

ರವಿ ಬುಧ ಪ್ಲವ॥ಸಂ॥ಪ್ರ॥ ಬಹುಳ

ಶುಕ್ರ ಕುಜ ಅಮವಾಸ್ಯೆ ತಾ:೪-೨-೧೯೬೨

ಚಂದ್ರ ಶನಿ ೫

೯೮ ೭ ೬

೧. ಶಿವಮೊಗ್ಗಪ್ರಾಂತಷಿಕಾರಿಪುರದ ಕುಮುದ್ವತಿ

೨. ನದೀತೀರದಲ್ಲಿ ಶ್ರೀ ಶಾ..೧೮೮೧ ವಿಕಾರಿಸಂ

೩. ಫಾ॥ಶುದ್ಧದಲ್ಲಿ ಶ್ರೀಜ॥ ಸಿದ್ಧೇಶ್ವರಶಿಚಾರ್ಯ

೪. ಸ್ವಾಮಿಗಳಸನ್ನಿಧಿಯಲ್ಲಿ ೬೪ ಉಪಾಚಾರ್ಯರ

೫. ಪೂಜಾ ಅತಿರುದ್ದರಹೋಮ ಮತ್ತು ಶಿವಾದ್ವೈತ

೬. ಸಮೀಲನ ಕಾರ್ಯಕ್ರಮಗಳು ಮತ್ತು ಈ ಪೀಠಾದಕಾ-

೭. ಡಿಂದ ಭಾರತ।ಹು।ಪರ್ಯಂತ ರುದ್ರಾಭಿಷೇಕಮ

೮. ತ್ತು ಜಪಯಜ್ಞಾದಿ ಕಾರ್ಯಕ್ರಮಗಳು ನಡೆದಿದೆ

೮. ಶ್ರೀ ಮರುಳುಸಿದ್ಧ ದೇವಾಲಯದ ಹೊರಗಡೆ ಇರುವ ಶಾಸನ ತುಂಡು ಪಾಠ :

೧. ........................................

೨. ಸ್ವಸ್ತ....................................

೩. ೧೪೬ನೆಯ ರುಕ್ತಾ-

೪. ಕ್ಷಿಸಂವತ್ಸರದ ಭೌಯ

೫. ಲ ಉಜ್ಜಯನಿ

೬. ಲಿನರಯನಿ-

೭. (ಲಿ) ಸಿದ

**೯. ಕಸವನಹಳ್ಳಿ ಉತ್ತರಕ್ಕೆ ಹೊಲವೊಂದರಲ್ಲಿರುವ ಶಾಸನ :**

ಶಾಲಿವಾಹನ ಶಕೆ ೧೫೮೧ನೆಯ ವಿಕಾರಿ, ಫಾಲ್ಗುಣ, ಶು.೩, ಶುಕ್ರವಾರಕ್ಕೆ ಸರಿಯಾದ ಕ್ರಿ.ಶ. -೩-೨-೧೬೬೦ನೆಯ ಶುಕ್ರವಾರದಮದು ವೀರವೆಂಕಟಪರಿಮಹಾರಾಯನ ಕುಮಾರ ಬಾಗುಳಿ ಬಸಪ್ಪನಾಯಕನು ಕಸವನಹಳಿ ಪುರವರ್ಗವು ಹಾಳು ಬಿದ್ದದ್ದನ್ನು ಸರಿಪಡಿಸಿ ಜೀರ್ಣೋದ್ಧಾರವನ್ನು ಮಾಡಿದ ಗಿರಿಮಲ್ಲಪನ ಮೊಮ್ಮಗ ಹಾಗೂ ಬಸವಯ್ಯನ ಮಗನಾದ ತಿರುಕಪ್ಪನಿಗೆ ಭೂದಾನ ನೀಡುತ್ತಾನೆ.

೧. ಶ್ರೀ (॥ *) ನಮಸ್ತುಂಗ ಸಿರಸ್ಚುಂ

೨. ಭಿ ಚಂದ್ರಚಾಮರಚಾರವೇ।

೩. ತ್ರೈಲೋಕ್ಯನಗರಾರಂಭ

೪. ಮೂಲಸ್ತಂಭಾಯ ಶಾಭಂ

೫. ವೇ ॥ ಸ್ವಸ್ತಿ ಶ್ರೀಜಯಾದ್ಬುದಯ

೬. ಶಾಲಿವಾಹನಶಖವರುಷ ೧೫೮

೭. ೧ನೆಯ ॥ ವಿಕಾ(ರಿ) ಸಂವತ್ಸರದ ಫಾಲ್ಗು

೮. ಣ ಶು ೩ ಸುಕ್ರುವಾರದಲಿ ಶ್ರೀಮ(ಂ)ನ್ಮ

೯. ಹಾರಾಜಾಧಿರಾಜ ರಾಜಪರಮೇಶ್ವರ

೧೦. ರ ಶ್ರೀವೀರಪ್ರತಾಪ ಶ್ರೀವೀರವೆಂಕಟ

೧೧. ಪತಿಮಹಾದೇವರಾಯರ ಕೊಮರ ಬಾಗು

೧೨. ಳಿ ಬಸವಪನಾಯಕರೂ ಕಸವನಹ

೧೩. ಳಿಯ ಪುರವರ್ಗ್ಗನು ಶ್ರೀರೇ...

೧೪. ದೇವರಿಗೆ ಕೊಟ್ಟು ಯಿತ್ತು ಅ...

೧೫. ದಿಂದಲು ಅ ಪುರವರ್ಗ್ಗ ಅರಮನೆಗೆ ಬಿದು

೧೬. (ಹೊ)ೇಗಿ ಯಿರಲಾಗಿ ಗಿರಮಲಪಣನ ಮಗ ಬಸ

೧೭. ವಯನು ಹಜನಿ ಸಿಂಹಾಸನದ ಸಿಸ್ಯ

೧೮. ನ(ಂ)ಮ್ಮ ಬಿರುದು ನಂಮ ಯೆಳೆಯ ಬ

೧೯. ಯ್ಯಗ್ರಾಮ ಜೀರ್ಣೋದ್ಧಾರವಂನೂ

೨೦. ಮಾಡಿ ತಂದ ಕಾರಣ ಗುರುಸ್ವಾಮಿ

೨೧. ಮಳೆಸ್ವಮಿ ಪಟದೈಯಗಳು ವ

೨೨. ಕುಳದ ಯರೆ ಭೂಮಿನು ನಂಮ ಮೊಂದು

೨೩. ಗ ಸಾಂತರಾಉತ್ತನ ಮಗ ಗಿರಮಲ್ಲಪ್ಪ ಆ

೨೪. ತನ ಮಗ ಬಸವಯ್ಯನ ಮಗ (ತಿರುಕಪಗೆ)

೨೫. ಪುತ್ರ ಪುತ್ರ ಪಾರಂಪರಿಯಾಗಿ ಅಂಚೆ

೨೬. ದ್ರಾರ್ಕ್ಯವಾಗಿ ಕೊಟ್ಟಂತ ದಾನಶಾನಸ ॥

೨೭. ಯೀ ದನಕೆ ಅರಮನೆಯವರಾಗ

೨೮. ಲ್ಲಿ ಕೊಟ್ಟ ಕ್ರಿರ್ತುವಿನ ಬಗೆಯವರಾ

೨೯. ಲಗಲಿ ಯಿವರೊಳಗೆ ಆರು ತಪ್ಪಿ

೩೦. ದರ ಆ ತಪ್ಪಿದವರ ಬಾಯೊಳ

೩೧. ಗೆ ಕತ್ತೆತುಂಣಿ ಕಲ್ಲುಪ್ಪು ॥ ಸ್ವ

೩೨. ದತ್ತದ್ವಿಗುಣಂ ಪು(ಂ)ಣ್ಯಂ ಪರದ

೩೩. ತನುಪಾಲನಂ ಪರದತಪಹಾ

೩೪. ರಿಣಾಂ ಸ್ವದತ್ತಂ ವಿಷ್ಪಲಂ ಬ

೩೫. ವೇತ್ತು ॥ ಶ್ರೀ ಶ್ರೀ ಶ್ರೀ

ಶತಮಾನದಿಂದ ೧೬ನೇ ಶತಮಾನದವರೆಗೂ ಅದೇ ಹೆಸರಿನಿಂದ ಕರೆಯಲ್ಪಟ್ಟಿದೆ.

೫. ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲೂಕಿನ ಕಡಬಗೆರೆಯಲ್ಲಿನ ಶಾಸನವು (ಕ್ರಿ.ಶ. ೧೬೬೦)ಶ್ರೀ ವೀರ ವೆಂಕಟಪತಿ ಮಹಾದೇವರಾಯನ ಪುತ್ರ ಬಾಗಳಿಯ ಬಸವಪ್ಪ ನಾಯಕನು ಗಿರಿಮಲ್ಲಪ್ಪನ ಮಗ ಉಜ್ಜನಿ ಸಿಂಹಾಸನದ ಶಿಷ್ಯ ಬಸವಯ್ಯನ ಮಗ ತಿರುಕಪ್ಪೆಗೆ 'ಕಸವನಹಳ್ಳಿ'ಯನ್ನು ಜೀರ್ಣೋದ್ಧಾರಕ್ಕಾಗಿ ಕೆಲವು ಭೂಮಿಯನ್ನು ದಾನ ಕೊಟ್ಟಿರುವುದಾಗಿ ತಿಳಿಸುತ್ತದೆ. ಈ ಶಾಸನದಲ್ಲಿ ಶ್ರೀ ಮುರುಳಸಿದ್ಧೇಶ್ವರ ಸ್ವಾಮಿಯ ಸುಕ್ಷೇತ್ರಕ್ಕೆ ಉಜ್ಜಿನಿ ಎಂಬ ಹೆಸರು ಬಳಕೆಯಾಗಿರುವುದನ್ನು ನಾವು ನೋಡಬಹುದಾಗಿದೆ.

**ಮರುಳಸಿದ್ಧನ ಹಾಡು**

೧. ಪರುಶೆ ಬರಲವ್ವ ಪರಮೇಶ್ವರಗೆ
ದೊರೆಯಾಳು ಉಜ್ಜಿನಿ ಮರುಳಸಿದ್ಧಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೨. ನಿತ್ಯ ಗೌರಮ್ಮನ ನಿಲಸ್ಯಾನು ಕನ್ಯೆಲೆ
ಬಾಸಿಂಗ ಕಟ್ಟಿ ಹೋಗದಾರ ಮರುಳಣ್ಣನ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೩. ಬಾಸಿಂಗ ಕಟ್ಟಿ ಹೋಗದರಿಬ್ಬರನು
ದಂಡಿಸಿ ಹೊಯ್ದು ಯಮಗಂಟ್ಟ ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೪. ಪರುಶೆ ಬರುತಿರಲಿ ನನ್ನಯ್ಯಗೆ
ಉಜ್ಜಿನಿ ಮರುಳಸಿದ್ಧಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೫. ಹಳ್ಳವಾ ಇಳಿದಾಗ ಸೆಲ್ಯುವುದು ಗೆಜ್ಜೆ
ನಲ್ಲಾನಾ ನುಡಿಗೆ ನಡೆಗೆವು ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೬. ಕಟ್ಟೆಯ ಇಳಿಯುವಾಗ ತಿಚ್ಚನಾ ಗೆಜ್ಜೆ
ನಿಚ್ಚಂತ ಗುಡಿಗೆ ಬಡಿಯುವ ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೭ ಅಪ್ಪಾ ನನ್ನ ಕಾಲು ತುಪ್ಪಕಿಂತ ಮಿದುವು
ಮತ್ತೆಲ ಮುಳ್ಳು ತುಳೆದೋ ನನ್ನಯ್ಯನೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೮. ಹನ್ನೊಂದು ದಿನದಾಗ ಬಂದವರು ಹೋಗುವಾಗ
ತೇರ ಬಯಲಿಗೆ ನೆಲೆನಿಂತ ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೯. ತೇರಿನ ಬಯಲಿಗೆ ನೆಲೆನಿಂತ
ಮರುಳಣ್ಣಗೆ ಹೊಂಬಾಳೆ ಬೆಳಗ್ಯಾವಾ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

೧೦. ತೇರಿನಾ ಬಯಲಿಗೆ ನೆಲೆನಿಂತ
ನನ್ನಯ್ಯಗೆ ಬಾಳೆಹಣ್ಣು ಬೆಳಗ್ಯಾರೋ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ॥೨॥

ಹಾಡಿದವರು: ಹೊಸಕೇರಿ ಬಸಮ್ಮ ಮತ್ತು ಸಂಗಡಿಗರು

## ಸಂಕ್ಷೇಪಗಳು

| | | |
|---|---|---|
| ೧. | ಇಂ.ಆ.ರಿ. | ಇಂಡಿಯನ್ ಆರ್ಕ್ಯಾಲಾಜಿಕಲ್ ರಿಪೋರ್ಟ್ |
| ೨. | ಇ.ದ.ಸಂ. | ಇತಿಹಾಸ ದರ್ಶನ ಸಂಪುಟ |
| ೩. | ಇ.ಐ. | ಎಪಿಗ್ರಾಫಿಯಾ ಇಂಡಿಕಾ |
| ೪. | ಇ.ಸಿ. | ಎಪಿಗ್ರಾಫಿಯಾ ಕರ್ನಾಟಕ |
| ೫. | ಐ.ಎ. | ಇಂಡಿಯನ್ ಆಂಟಿಕ್ವಯಿರಿ |
| ೬. | ಕ.ವಿ.ವಿ.ಶಾ.ಸಂ. | ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ |
| ೭. | ಕೆ.ಐ. | ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ |
| ೮. | ಎಂ.ಎ.ಆರ್. | ಮೈಸೂರು ಆರ್ಕ್ಯಾಲಾಜಿಕಲ್ ರಿಪೋರ್ಟ್ |
| ೯. | ಎಸ್.ಐ.ಐ. | ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ |
| ೧೦. | ಸಂ. | ಸಂಪಾದಕ |

## ಗ್ರಂಥಋಣ


೧. ಕಲಬುರ್ಗಿ ಎಂ.ಎಂ., **ಕರ್ನಾಟಕದ ಕೈಫಿಯತ್ತುಗಳು**, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೧೯೯೪

೨. ಕೊಟ್ರೇಶ್ ಎಂ., **ಕೋಟೆ–ಕೊತ್ತಲಗಳು (ಬಳ್ಳಾರಿ ಜಿಲ್ಲೆ)**, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ

೩. ಗಿರಿಜಾ, **ಸಂಡೂರು ಪರಿಸರದ ಶಾಸನ ಉಲ್ಲೇಖಿತ ದೇವಾಲಯಗಳು**, ಅಪ್ರಕಟಿತ ಎಂ.ಫಿಲ್. ಪ್ರಬಂಧ

೪. ಚಂದ್ರಶೇಖರಯ್ಯ ಎಂ., **ಕೂಡ್ಲಿಗಿ ತಾಲೂಕು ದರ್ಶನ**, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೭

೫. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸ್ವಪ್ನಬುಕ್ ಹೌಸ್, ಬೆಂಗಳೂರು, ೧೯೬೬

೬. ತಿಪ್ಪೇಸ್ವಾಮಿ ಡಿ., **ಕೋಗಳಿನಾಡಿನ ಶಾಸನಗಳ ಅಧ್ಯಯನ**, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ೨೦೧೪

೭. ದೇವರಕೊಂಡಾರೆಡ್ಡಿ (ಸಂ), **ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪು–೧**, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೧೯೯೯

೮. ನಾಗಯ್ಯ ಜೆ.ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**

೯. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನಶಿಲ್ಪ, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೧೯೯೯

೧೦. ಪರಮಶಿವಮೂರ್ತಿ ಡಿ.ವಿ., **ಸಂಶೋಧನ ಸಿರಿ**, ಗುಣನಿಧಿ ಪ್ರಕಾಶನ

೧೧. ಪಾಟೀಲ, ಸಿ.ಎಸ್. **ಬಳ್ಳಾರಿ ಜಿಲ್ಲೆಯ ಶಾಸನಗಳು ಭಾಗ–೨**, ಪ್ರಾಚ್ಯ ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೭

೧೨. ಮಂಜುನಾಥ ಎಂ.ಜಿ., **ಕನ್ನಡ ಲಿಪಿಶಾಸ್ತ್ರ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮

೧೩. ರವೀಂದ್ರನಾಥ ಕೆ., **ಕನ್ನಡ ದಾಖಲು ಸಾಹಿತ್ಯ**, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ

೧೪. ವಿರೂಪಾಕ್ಷಿ ಪೂಜಾರಹಳ್ಳಿ, **ಬಳ್ಳಾರಿ ಜಿಲ್ಲೆಯ ಪಾಳೆಗಾರರು,** ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ

೧೫. ವೃಷಭೇಂದ್ರಾಚಾರ್ ಎ. ಇತರರು, **ಮುನ್ನಡೆಯ ಕೂಡ್ಲಿಗಿ,** ಹೇಮಂತ ಪ್ರಕಾಶನ, ಎಂ.ಬಿ. ಐಯ್ಯನಹಳ್ಳಿ, ೧೯೯೮

೧೬. ಶೇಷಶಾಸ್ತ್ರಿ ಆರ್., **ಕರ್ನಾಟಕ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೧೭. ಷಡಕ್ಷರಯ್ಯ ಆರ್.ಎಂ., **ಉಜ್ಜಯಿನಿ ಸದ್ಧರ್ಮ ಪೀಠದ ಸಾಂಸ್ಕೃತಿಕ ಅಧ್ಯಯನ,** ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನ ಜ್ಞಾನಗುರು ವಿದ್ಯಾಪೀಠ, ಉಜ್ಜಯಿನಿ, ೨೦೦೨

೧೮. ಸದಾಶಿವಪ್ಪ ಕುಂ.ಬಾ., **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಸಂಶೋಧಿತ ಲೇಖನಗಳು,** ಹೇಮಂತ ಪ್ರಕಾಶನ, ಕುಂಚೂರು, ೧೯೯೦

೧೯. ಸುರೇಶ ಕೆ.ಎಂ. ಮತ್ತು ಇತರರು, **ಕರ್ನಾಟಕ ದೇವಾಲಯಗಳ ಕೋಶ,** ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೧೯೯೯

೨೦. ಹಿರೇಮಠ ಬಿ.ಆ.ರ್., **ಕನ್ನಡ ಶಾಸನಗಳಲ್ಲಿ ವರ್ತಕರು,** ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ, ೧೯೮೦

**ಲೇಖನಗಳು :**

೧. **ಆರ್ಕ್ಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ,** ೧೯೧೬, ಆರ್.ಬಿ.ಫೂಟ್

೨. ತಿಪ್ಪೇಸ್ವಾಮಿ ಎಚ್., **ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಇತಿಹಾಸ ದರ್ಶನ ಸಂಪುಟ–೧೪–೧೫**

೩. ತಿಪ್ಪೇಸ್ವಾಮಿ ಎಚ್., **ಕೂಡ್ಲಿಗಿ ತಾಲೂಕಿನ ಪ್ರಾಗೈತಿಹಾಸಿಕ ನೆಲೆಗಳು, ಇತಿಹಾಸ ದರ್ಶನ ಸಂಪುಟ–೧೬**


ಸಿರುಗುಪ್ಪ
Siruguppa
Hosapete
ಹೊಸಪೇಟೆ
Bellari
ಬಳ್ಳಾರಿ
Hagari
Bommanahalli
ಹಗರಿ
ಬೊಮ್ಮನಹಳ್ಳಿ
Sandur
ಸಂಡೂರ
Hadagali
ಹಡಗಲಿ
Kudligi
ಕೂಡ್ಲಿಗಿ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಗರ್ಭ ಗೋಪುರ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಲಕ್ಷ್ಮೀ ಸ್ತೂಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಸಹಸ್ರದಳ ಕಮಲ (ಸುಖನಾಸಿ)



ಉಜ್ಜಿನಿ ಗ್ರಾಮದಲ್ಲಿನ ಹರಿಶಿಣ ಬಾವಿ



ಉಜ್ಜಿನಿ ಗ್ರಾಮದ ಈಶ್ವರ ಲಿಂಗ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ರಥೋತ್ಸವದ ಸಂಭ್ರಮ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಶಿಖರಕ್ಕೆ ತೈಲಾಭಿಷೇಕದ ಸಂಭ್ರಮ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ಬಸವಣ್ಣನ ವಿಗ್ರಹ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಯತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಯತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಯತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಯತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ  ಯತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ  ಭಕ್ತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಭಕ್ತಿ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಭಕ್ತೆ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದ ಭಕ್ತೆ ಶಿಲ್ಪ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ಪೌಳಿಯಲ್ಲಿನ ಶಾಸನ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ  ಕಂಬದ ಮೇಲಿನ ಶಾಸನ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ  ಘಂಟೆ ಮೇಲಿನ ಶಾಸನ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ಗೋಡೆ ಮೇಲಿನ ಶಾಸನ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ಶಾಸನ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ಶಾಸನ



ಉಜ್ಜಿನಿ ಗ್ರಾಮದಲ್ಲಿನ ವೀರಗಲ್ಲು



ಉಜ್ಜಿನಿ ಗ್ರಾಮದಲ್ಲಿನ ವೀರಗಲ್ಲು



ಉಜ್ಜಿನಿ ಗ್ರಾಮದಲ್ಲಿನ ವೀರಗಲ್ಲು



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ವೇಣುಗೋಪಾಲನ ವಿಗ್ರಹ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ವೀರಭದ್ರನ ವಿಗ್ರಹ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ ಗಣಪತಿ ವಿಗ್ರಹ



ಶ್ರೀ ಉಜ್ಜಿನಿ ಮರುಳಸಿದ್ದೇಶ್ವರ ದೇವಾಲಯದಲ್ಲಿನ  ಸ್ತೂಪ ಸ್ತಂಭಗಳು

